# ಪುಸ್ತಕ ನೋಡಿ



ಮ. ಮಲ್ಲಪ್ಪ



ಮಂಡ್ಯ ಜಿಲ್ಲೆ



ಜ್ಞಾನಕಿರಣ ILIV

ಎಚ್. ಎಂ. ಮಹೇಶನ ಸ್ಮಾರಕ ಗ್ರಂಥ IV

ಜ್ಞಾನಕಿರಣವು ಸರ್ವತೋಮುಖವಾಗಿ ಸಾಗಲಿ – ಋಗ್ವೇದ

# ಪುಸ್ತಕ ನೋಡಿ




**ಪರಿಚಯ :**

**ಮ. ಮಲ್ಲಪ್ಪ**

ಪ್ರಕಟಣೆ

**ಜ್ಞಾನಕಿರಣ ಪ್ರಕಾಶನ**

ಹಲಗೂರು–571 421

ಮಂಡ್ಯ ಜಿಲ್ಲೆ

PUSTAKA NOODI Written by M. Mallappa
Published by Jnana Kirana Prakashana
Halagur–571 421 Karnataka State.

೧೦–೧೨–೧೯೮೮







ಬೆಲೆ : ಎಂಟು ರೂಪಾಯಿಗಳು

ಮುದ್ರಣ :
ಶ್ರೀ ರೇಣುಕ ಪವರ್ ಪ್ರೆಸ್
ಓ. ಟಿ. ಸಿ. ರಸ್ತೆ,
ಬೆಂಗಳೂರು – 560 053

# ಚಿರಸ್ಮೃತಿ



**ಎಚ್. ಎಂ. ಮಹೇಶ,** ಬಿ.ಕಾಂ,

ಉದಯ : 28-6-1962 ಅಸ್ತಂಗತ : 7-4-1988

# ನೆ ನ ಕೆ

ಮಂಡ್ಯ ಜಿಲ್ಲೆಗೆ ಸಂಬಂಧಿಸಿದಂತೆ ಓರುಗಲ್ಲು ಸೂರೆ, ಧನಗೂರು ಮಠದ ಗುರು ಪರಂಪರೆ, ಬಿದಿರುಕೋಟೆ, ಮಂಡ್ಯಜಿಲ್ಲಾ ಸಮಕಾಲೀನ ಬರಹಗಾರರು, ಮಂಡ್ಯ ಮಹತಿ, ಮದ್ದೂರು ಮಾಹಿತಿ, ಮಳವಳ್ಳಿ ತಾಲ್ಲೂಕು ದರ್ಶನ, ಹಲಗೂರು ಬೃಹನ್ಮಠದ ಸಂಕ್ಷಿಪ್ತ ಇತಿಹಾಸ – ಈ ಪುಸ್ತಕಗಳು ನನ್ನಿಂದ ಬರೆಯಲ್ಪಟ್ಟು ಬೆಳಕಿಗೆ ಬಂದಿವೆ. ಇದು ಆ ಬಗ್ಗೆ ಒಂಬತ್ತನೆ ಪುಸ್ತಕ. ಮುಂದಿನದು ಮಾಂಡವೀ ಪತ್ರಿಕಾ ಪ್ರಪಂಚ. ಹಸ್ತಪ್ರತಿಯನ್ನು ಮುದ್ರಣಕ್ಕೆ ಸಿದ್ಧಗೊಳಿಸಿಕೊಟ್ಟ ಶ್ರೀ ಎಸ್. ರಾಜಶೇಖರಪ್ಪ, ಅಧ್ಯಾಪಕರು, ಹಲಗೂರು; ಪುಸ್ತಕದ ಕರಡಚ್ಚು ನೋಡಿ ನೆರವು ನೀಡಿದ ಡಾ॥ ಎಸ್. ವಿದ್ಯಾಶಂಕರ, ಉಪಪ್ರಾಧ್ಯಾಪಕರು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು–೫೬ ; ಈ ಕಾರ್ಯದ ವೇಳೆ ನನ್ನ ಸಂಗಡ ಸಹಕರಿಸಿ ಅಡ್ಡಾಡಿದ ಶ್ರೀ ಎಲ್. ಬಸವರಾಜು, ಮುಖ್ಯೋಪಾಧ್ಯಾಯರು, ನಿರಂಜನ ಪ್ರಾಥಮಿಕಶಾಲೆ, ಬೆಂಗಳೂರು; ಇದನ್ನು ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ರೇಣುಕ ಪವರ್ ಪ್ರೆಸ್‌ನ ಮಾಲೀಕರು ಮತ್ತು ಕಾರ್ಮಿಕರು ; ಇದನ್ನು ಕೊಂಡು ಓದುವ ವಾಚಕವರ್ಗ––ಈ ಎಲ್ಲರಿಗೆ ನನ್ನ ಅನಂತ ನಮನಗಳು.

ಜ್ಞಾನಮಂದಿರ, ಹಲಗೂರು — ಮ. ಮಲ್ಲಪ್ಪ




# ಪ ರಿ ವಿ ಡಿ

# ನಂಬಿಯಣ್ಣ – ಒಂದು ಅಧ್ಯಯನ



ಎಸ್. ವಿದ್ಯಾಶಂಕರ,
ಎಂ.ಎ., ಪಿಎಚ್.ಡಿ.,
ಉಪಪ್ರಾಧ್ಯಾಪಕರು,
ಕನ್ನಡ ಅಧ್ಯಯನ ಕೇಂದ್ರ,
ಬೆಂಗಳೂರು ವಿಶ್ವವಿದ್ಯಾಲಯ,
ಬೆಂಗಳೂರು-೫೬

ಈ ಪುಸ್ತಕದ ಅರಿಕೆಯನ್ನು ಅವಲೋಕಿಸಿದರೆ ಗ್ರಂಥಕರ್ತೃಗಳಾದ ಎಸ್. ವಿದ್ಯಾಶಂಕರ್‌ರವರ ಗೊತ್ತು ಗುರಿ ಗೊತ್ತಾಗುತ್ತದೆ. ನಂಬಿಯಣ್ಣ ತಮಿಳುನಾಡಿನ ಶೈವ ಪುರಾತನರಲ್ಲಿ ಕೊನೆಯವನು; ಶಿವನ ಕಡು ನಿಷ್ಠಾವಂತ ಭಕ್ತನು. ಪ್ರಸಿದ್ಧ ತೇವಾರಂಗಳ ಕರ್ತೃ. ಎಂಟನೆಯ ಶತಮಾನದ ಆದಿಭಾಗ ದಲ್ಲಿದ್ದ. ಈತನ ಬಗ್ಗೆ ತೀ. ನಂ. ಶ್ರೀಯವರು ಸಂಪಾದಿಸಿದ್ದ 'ನಂಬಿಯಣ್ಣನ ರಗಳೆ' ಪುಸ್ತಕವು ಪಠ್ಯಪುಸ್ತಕವಾಗಿ ಅದನ್ನು ವಿದ್ಯಾರ್ಥಿಗಳಿಗೆ ಪಾಠ ಹೇಳುವ ವೇಳೆ ಅದರ ಚಲುವಿಗೆ ಮನಸೋತು ಮಾರುಹೋದ ವಿದ್ಯಾಶಂಕರರು ಅದನ್ನು ಅಲ್ಲಿಗೇ ಅಂತ್ಯಗೊಳಿಸದೆ ಹುಣ್ಣಿಮೆ ಚಂದ್ರನ ಬೆಳಕಿನ ವಿಸ್ತರಣೆಯಂತೆ ದಿನೇ ದಿನೇ ಲೇಖಕರ ಆಸಕ್ತಿ ಅರಳಿ ನಂಬಿಯಣ್ಣನ ಬಗ್ಗೆ ಹೆಚ್ಚು ಹೆಚ್ಚಿನ ಅಧ್ಯಯನ ವನ್ನು ಕೈಗೊಂಡರು. ಜ್ಞಾನ ದಾಹವು ದಿನೇ ದಿನೇ ಏರುತ್ತಿದ್ದಂತೆಯೇ ಪರಿ ಶ್ರಮ ಪ್ರವಹಿಸಿ ನಂಬಿಯಣ್ಣನ ಬಗ್ಗೆ ಆಳವಾಗಿ ಅಧ್ಯಯನ ಮಾಡಿದುದರ ಜೊತೆಗೆ ವಿವಿಧ ಬಗೆಯಲ್ಲಿ ಕಾರ್ಯವನ್ನು ಕೈಗೊಂಡರು. ತತ್ಪರಿಣಾಮವಾಗಿಯೇ ಈ ಸಂಶೋಧನ ಕೃತಿಯು ಜನ್ಮದಾಳಿದೆ.

ಸಂಶೋಧನಾ ಕಾರ್ಯ ಸುಲಭಸಾಧ್ಯವಾದುದೇನೂ ಅಲ್ಲ. ಗೌರೀಶಂಕರಾರೋಹಣದಷ್ಟೇ ಶ್ರಮಸಾಧ್ಯವಾಗಿದೆ. "ಸಂಶೋಧಕನ ಮುಖ್ಯ ಕರ್ತವ್ಯವೆಂದರೆ ಮೂಲ ಸಾಮಗ್ರಿ ಎಲ್ಲೆಲ್ಲಿದೆ ಎಂಬುದನ್ನು ಕಂಡುಹಿಡಿದು ಅದರ ಸಾಕ್ಷಾತ್ಕಾರದ ಪರಿಚಯವನ್ನು ಪಡೆಯುವುದು; ತನ್ನ ಅನ್ವೇಷಣೆಯಲ್ಲಿ ದೊರೆತ ಯಾವ ಸತ್ಯಾಂಶವನ್ನೂ—ಅದು ತನ್ನ ಮನಸ್ಸಿನ ಒಲವಿಗೆ, ಸಂಪ್ರದಾಯದ ನಂಬಿಕೆಗೆ, ಅವರೆಗಿನ ಗ್ರಹಿಕೆಗೆ ಹೊಂದಿಕೆಯಾಗದಂತೆ ತೋರಿದರೂ ಕೂಡ— ಕೈಬಿಡದೆ ತಿರಿಮುರಿ ಮಾಡದೆ ಯಥಾವತ್ತಾಗಿ ಉಲ್ಲೇಖಿಸುವುದು. ತನ್ನ ಎದುರಿಗಿರುವ ಎಲ್ಲ ಅಂಶಗಳನ್ನೂ ನ್ಯಾಯಾಧೀಶನಂತೆ ತೂಗಿ, ವಿಮರ್ಶಿಸಿ, ವಸ್ತುನಿಷ್ಠವಾದ ಪರಿಶೀಲನೆಯಿಂದ ಹೊರಟ ನಿರ್ಣಯಗಳನ್ನು ಖಚಿತವಾಗಿ ನಿರೂಪಿಸುವುದು."[1] ಈ ಅಂಶವು ಇಲ್ಲಿ ಪೂರ್ಣ ಕುಂಭವಾಗಿದೆ. ಕೇವಲ ಪುಸ್ತಕಗಳನ್ನು ನೋಡಿಕೊಂಡು ಕಣ್ಣುಮುಚ್ಚಿಕೊಂಡು ಮಕ್ಕಿಕಾ ಮಕ್ಕಿಯಾಗಿ ಕೆಲಸ ಮಾಡಿಲ್ಲ. ವಿಶಿಷ್ಟ ವಿಶೇಷತರವಾಗಿ ಕೆಲಸ ಮಾಡಿದ್ದಾರೆ. ತಮಿಳುನಾಡಿನ ಪುರಾತನರ ಜನ್ಮಸ್ಥಳ ಹಾಗೂ ಕಾರ್ಯಕ್ಷೇತ್ರಗಳಿಗೆ ಹೋಗಿ ಕ್ಷೇತ್ರಾಧ್ಯಯನ(*Field work*) ಸಾಗಿಸಿದ್ದಾರೆ. ಈ ಕಾರ್ಯಗಿರಿ ಏರುವ ಪ್ರಯಾಸ ಪ್ರವಾಸ. ಈ ಬಗೆಯ ಭಗೀರಥ ಕಾರ್ಯವನ್ನು ಕೈಗೊಂಡು ಸಫಲರಾಗಿದ್ದಾರೆ. ಎಂತೆಂತಹ ಅತಿರಥ ಮಹಾರಥ ಸಾಹಿತಿಗಳೂ ಕೂಡ ಮಾಡದ ಹೊಸಬಗೆಯ ಸಾಹಸ ಕಾರ್ಯವನ್ನು ಕೈಗೊಂಡ ಇವರು ಉಲ್ಲೇಖನಾರ್ಹರು. ಉದಾಹರಣೆಗೆ ಧನಗೂರಿನ ಷಡಕ್ಷರದೇವನ ವಿಚಾರವೇ ಸಾಕಾಗಿದೆ. ಆತನ ಬಗ್ಗೆ ಅನೇಕ ಗ್ರಂಥಗಳು ಈಗಾಗಲೇ ಬಂದಿವೆ. ಕವಿಯು ಕಾವ್ಯಗಳನ್ನು ರಚಿಸಿದ ಶಿವಲಿಂಗ ದೇವಾಲಯದ ಉಲ್ಲೇಖ ಇನ್ನಾವ ಪುಸ್ತಕದಲ್ಲಿಯೂ ಬಂದಿಲ್ಲ. ಧನಗೂರು ಕೆರೆಯ ಏರಿಯ ಬಲಬದಿಯಲ್ಲಿ ಈ ಶಿವಲಿಂಗ ದೇವಾಲಯ ಇದೆ. ಅಪರಿಚಯ ಸ್ಥಳವಾದ ಆ ಜಾಗಗಳಲ್ಲಿ ಎಷ್ಟು ಪರದಾಡಿದ್ದಾರೋ ಅದು ಅವರಿಗೇ ಗೊತ್ತು. ಪ್ರಸವ ವೇದನೆಯು ಮಕ್ಕಳನ್ನು ಹೆತ್ತವರಿಗೇ ಗೊತ್ತು. ಇನ್ನೊಂದು ನಿದರ್ಶನ 1980 ರಂದು ಮೈಸೂರಿನ ಕೆ. ಅನಂತರಾಮು ಅವರು ಮಂಡ್ಯ ಜಿಲ್ಲೆಯ ಸ್ಥಳಗಳ ಬಗ್ಗೆ

---

1. ಪ್ರೊ. ತೀ. ನಂ. ಶ್ರೀಕಂಠಯ್ಯ: ಎಂ. ಚಿದಾನಂದಮೂರ್ತಿಯವರ 'ಶೂನ್ಯ ಸಂಪಾದನೆಯನ್ನು ಕುರಿತು' ಪುಸ್ತಕಕ್ಕೆ ಬರೆದ ಮುನ್ನುಡಿ, ಪು. IV

ಅಧ್ಯಯನ ನಡೆಸಿದರು. ಅವರ ಸಂಗಡ ಬಸವನ ಹಳ್ಳಿ ಸೋಲಿಗರ ಕೇರಿಗೆ ನಾನು ಹೋಗಿದ್ದೆ. ರಾತ್ರಿಯಾಯಿತು, ಬಸವನ ಹಳ್ಳಿಯಲ್ಲಿ ಪಡಶಾಲೆಯೊಂದರಲ್ಲಿ ಇಬ್ಬರೂ ಮಲಗಿದೆವು. ಬೆಟ್ಟದ ಚಳಿ ಕೊಲೆಯುತ್ತಿದ್ದರೂ ಅದನ್ನು ಅದುಮಿಕೊಂಡೇ ನಾವಿಬ್ಬರೂ ಮಲಗಿದ್ದೆವು. ಕೊನೆಗೆ ಆ ಮನೆಯ ಯಜಮಾನನು ಮತ್ತೊಂದು ಮನೆಗೆ ಕಳುಹಿಸಿದನು. ಅದು ಬೆಚ್ಚಗಿರುವ ಸ್ಥಳವಾಗಿದ್ದರೂ ಮತ್ತೊಂದು ತೊಂದರೆ. ಅದು ಹೊಸದಾಗಿ ಕಟ್ಟಿದ ಮನೆ. ಗಾರೆ ಗಚ್ಚು ಸಂಪೂರ್ಣವಾಗಿರಲಿಲ್ಲ. ಬೆಣಚು ಕಲ್ಲುಗಳು ಬೆನ್ನಿಗೆ ಒತ್ತಿದ್ದೇ ಒತ್ತಿದ್ದು. ಬೆಳಗಾಯಿತು. ಅಲ್ಲಿಂದ ನಿರ್ಗಮಿಸಿದೆವು. ಅಖಂಡ ಮಂಡ್ಯ ಜಿಲ್ಲೆಯಲ್ಲಿಯೇ ಕೆ. ಅನಂತರಾಮು ಅವರು ಸುತ್ತಾಡಿದರು. ಅಲ್ಲಲ್ಲಿ ಕಾಲು ನಡಿಗೆಯಲ್ಲಿ ಸಾಗಿದ್ದರೆ, ಇಲ್ಲಿ ವಿದ್ಯಾಶಂಕರರು ಕೂಡ ಅಲ್ಲಲ್ಲಿ ಕಾಲುನಡಿಗೆಯಲ್ಲಿ ನಡೆದು ಅರ್ಚಕರನ್ನು ಭೇಟಿ ಮಾಡಿ ವಿಷಯ ಸಂಗ್ರಹಿಸಿದ್ದಾರೆ. ಅಲ್ಲಲ್ಲಿ ಪ್ರಯಾಣ ಮಧ್ಯದಲ್ಲಿ ಹಲವು ಹಿರಿಯರಿಂದ ವಿಷಯ ಸಂಗ್ರಹಿಸಿದ್ದಾರೆ. ತುಲನಾತ್ಮಕ ವಿಚಾರವಾಹಿನಿ ಸಾಕಾದಷ್ಟು ಶ್ರಮವಹಿಸಿದೆ.

ನಕ್ಷೆ, ಕೆಲವು ಛಾಯಾಚಿತ್ರ–ಇವುಗಳನ್ನು ಸಂಗ್ರಹಿಸಿ ಧನದ ಕೊರತೆಯಿಂದ ಇದರಲ್ಲಿ ಇವರು ಸೇರಿಸಲಿಲ್ಲ. ಇದೊಂದು ಸಾಂಸ್ಕೃತಿಕ ಸೀಮಂತರಿಗೆ ಅತ್ಯಂತ ಭಾರಿ ನಷ್ಟ. ವಿಶ್ವವಿದ್ಯಾನಿಲಯಗಳೂ, ಸಾಹಿತ್ಯ ಸಂಸ್ಕೃತಿ ಇಲಾಖೆಯೋ ಈ ಬಗ್ಗೆ ಗಮನ ಹರಿಸಿದ್ದರೆ ಫಲದಾಯಕವಾಗುತ್ತಿತ್ತು. ಆಸ್ತಿಕರಿಗೆ, ಭಾಕ್ತಿಕರಿಗೆ, ಸಂಶೋಧನ ಸಾಹಿತಿಗಳಿಗೆ ಇದೊಂದು ಅತ್ಯವಶ್ಯಕವಾಗಿ ಸಂಗ್ರಹಿಸಬೇಕಾದ ಅಗತ್ಯ ಕೃತಿ. ಇವರ ಈ ಅಧ್ಯಯನ, ಅಧ್ಯಯನ ಶೀಲರಿಗೆ ಒಂದು ಜೇನುಗೂಡು. ಸಹಾಯಕ ಸಾಹಿತ್ಯವನ್ನು ಇವರು ಬಹಳಷ್ಟು ಬಳಸಿಕೊಂಡಿದ್ದಾರೆ. ಇದೊಂದು ಮಹತ್ತೂ, ಬೃಹತ್ತೂ ಆದ ಕೃತಿ. ಗುಣದಲ್ಲಿ, ಸತ್ವದಲ್ಲಿ ಇವರ ಶ್ರಮ ಸಾಧನೆಯೂ ಈ ಪುಸ್ತಕದ ಪುಟ ಪುಟದಲ್ಲಿಯೂ ಎದ್ದು ಕಾಣುತ್ತಿದೆ. ಸಂಶೋಧನಾ ಸಾಹಿತಿಗೆ ಇದೊಂದು ಮಾರ್ಗದರ್ಶನ ಕೃತಿಯು. ಕೇವಲ ಮೇಲೆ ನಿಂತು ಕೆಲಸ ಮಾಡದೆ ಆಳಕ್ಕಿಳಿದು ತಳವನ್ನು ಶೋಧಿಸಿ ಸಾಗಿರುವ ಏಕಾಗ್ರತೆಯ ಕಾರ್ಯಪಟುತ್ವ ಕಾರಂಜಿಯಾಗಿದೆ. ಆಸಕ್ತಿ, ಉತ್ಸಾಹ, ಶ್ರದ್ಧೆ, ಸಹನೆ, ಹೆಸರಿಸುವಂತಿವೆ. ಇದರಲ್ಲಿ ಇವರ ಸ್ಪಷ್ಟ ಧ್ಯೇಯವು ಸಫಲವಾಗಿದೆ.

ಇದೊಂದು ವಿಮರ್ಶಾತ್ಮಕ ವಿದ್ವತ್ಪರಿಪೂರ್ಣವಾದ ಕೃತಿ. "ವಿಮರ್ಶೆ ವಿಶೇಷ ಕಾವ್ಯ ಸಂಸ್ಕಾರದಿಂದ ಪರಿಷ್ಕೃತವಾದ ಸಹೃದಯನೊಬ್ಬನು ಕಲಾ ಕೃತಿಯ ಬಗೆಗೆ ಪಡಿಮಿಡಿದ ಅನುಭವದ ವಿಚಾರ ನಿರೂಪಣೆ; ಸಾಹಿತ್ಯದ ಸೊಗ ಸನ್ನು ಸಹೃದಯರಿಗಾಗಿ ವ್ಯಾಖ್ಯಾನಿಸುವ ಒಂದು ನಿಷ್ಪಕ್ಷಪಾತವಾದ ಪ್ರಯತ್ನ; ಕೃತಿಯ ಗುಣದೋಷಗಳನ್ನು ಬೆರಳಿಟ್ಟು ನಿರ್ದೇಶಿಸುವ ಒಂದು ಕ್ರಮಬದ್ಧವಾದ ವಿವೇಚನೆ. ಯಾವ ಕಾರಣಗಳಿಂದ ಒಂದು ಕೃತಿ ಉತ್ತಮವಾಗಿದೆ ಅಥವಾ ಉತ್ತಮವಾಗಿಲ್ಲ ಎನ್ನುವ ತೀರ್ಮಾನದ ನಿರ್ದೇಶನ ಅಥವಾ ಮೌಲ್ಯ ನಿರ್ಣಯ"[2] ಈ ಅಂಶವನ್ನು ಇಲ್ಲಿ ಕಾಣುತ್ತೇವೆ. ನಂಬಿಯಣ್ಣನ ಬಗ್ಗೆ ಬಂದ ಕೃತಿಗಳನ್ನು ವಿವೇಚಿಸಿರುವ ಇವರ ಕುಶಾಗ್ರಮತಿಯು ಇಲ್ಲಿ ಪ್ರಕಟವಾಗಿದೆ. ಹರಿಹರನ ಪುರಾತನ್ನರಗಳೆಗಳು, ಪೆರಿಯ ಪುರಾಣಂ, ಶಿವಯೋಗಿ ಸೋಮೇಶನ ಅರುವತ್ತು ಮೂವರು ಪುರಾತನ ಚರಿತ್ರೆ, ಕಳಲೆ ನಂಜರಾಜನ ಅರುವತ್ತು ಮೂವರ ತ್ರಿಪದಿ —ಈ ಕೃತಿಗಳ ಪ್ರಸ್ತಾಪದಲ್ಲಿ ಇವರ ರಸ ವಿಮರ್ಶೆ ಎದ್ದು ಕಾಣುತ್ತದೆ. ಹರಿ ಹರನಿಗೆ ಪೆರಿಯ ಪುರಾಣವು ಆಕರವಾಗಿಲ್ಲ ಎಂಬ ಅಂಶ ಸಮರ್ಥನೆಯೇ ಇದರ ನಿದರ್ಶನವಾಗಿದೆ. ಕನ್ನಡ, ತಮಿಳು, ತೆಲಗು, ಸಂಸ್ಕೃತ ಸಾಹಿತ್ಯದಲ್ಲಿ ಬಂದಿ ರುವ ಸುಂದರ ನಂಬಿಯ ವಿಚಾರವನ್ನು ಸಾಮ್ಯ ವೈಷಮ್ಯಗಳಿಂದ ವಿಸ್ತಾರವಾಗಿ ನಿರೂಪಿಸಿ ಅಧಿಕೃತ ದಾಖಲೆಯೊಂದನ್ನು ಕನ್ನಡಿಗರಿಗೆ ಕೊಟ್ಟಿದ್ದಾರೆ. ಸಂಶೋ ಧಕ್ಷದಿಗ್ಗಜವಾದ ಎಂ. ಚಿದಾನಂದ ಮೂರ್ತಿಯವರ ಮುನ್ನುಡಿಯು ಈ ಕೃತಿ- ಗೊತ್ತು ಕೊಟ್ಟಿದೆ.

ಏಳು ಪ್ರಧಾನ ಪ್ರಕರಣಗಳು, ಹನ್ನೆರಡು ಉಪ ಪ್ರಕರಣಗಳು ಇಲ್ಲಿ ಇವೆ. ಕನ್ನಡಕ್ಕೂ ತಮಿಳಿಗೂ ಇರುವ ವ್ಯತ್ಯಸ್ಥ ಸಂಬಂಧಕ್ಕೆ ಒಂದು ನಿದರ್ಶನ ತಮಿಳು ನಾಡಿನ ಶರಣರ ಹಾಡಿನಲ್ಲಿ ಮುಚ್ಚಿದ ಬಾಗಿಲನ್ನು ತೆರೆದ ಬಗ್ಗೆ ಹಾಡೊಂ ದಿದೆ, ದೇವಸ್ಥಾನದ ಬಾಗಿಲನ್ನು ತೆರೆಯಿಸಿದವರು ಅಪ್ಪರ್ ಅವರು; ಮುಚ್ಚಿ ಸಿದವರು ತಿರುಜ್ಞಾನ ಸಂಬಂಧರು. ಹರಿಹರನ 'ವಾಗೀಶ್ವರ ದೇವರ ರಗಳೆ'

---

2, ಡಾ॥ ಜಿ. ಎಸ್. ಶಿವರುದ್ರಪ್ಪ : ವಿಮರ್ಶೆಯ ಪೂರ್ವಪಶ್ಚಿಮ ಪುಟ ೬

ಯಲ್ಲಿ ಇದು ತಿರುಗು ಮುರುಗಾಗಿದೆ. ಶಂಕರಾಚಾರ್ಯರಂತಹವರೂ ಕೂಡ ತಿರುಜ್ಞಾನ ಸಂಬಂಧರನ್ನು ಮುಕ್ತಕಂಠದಿಂದ ತಮ್ಮ ಸೌಂದರ್ಯ ಲಹರಿಯಲ್ಲಿ ಸ್ತುತಿಸಿದ್ದಾರೆ. ಭಕ್ತಿ ಚಳುವಳಿಯ ಮೂಲ ಪುರುಷರು ತಿರುಜ್ಞಾನ ಸಂಬಂಧರು ಎಂಬ ಅಂಶವನ್ನು ಕೊಟ್ಟು ಇಲ್ಲಿ ತಿಳಿಸಲಾಗಿದೆ. ಅಲ್ಲಲ್ಲಿ ಪ್ರತಿಯೊಂದು ವಿಚಾರಕ್ಕೂ ಪ್ರಸಂಗವನ್ನು ತಿಳಿಸಿದ್ದಾರೆ. ಶೈವ ಧರ್ಮ, ವೈಷ್ಣವ ಧರ್ಮಗಳನ್ನು ವಿವರಿಸುತ್ತಾ ಈ ಎರಡರಲ್ಲಿಯೂ ಇರುವ ಸಾಮ್ಯವನ್ನು ಎತ್ತಿ ತೋರಿಸಿದ್ದಾರೆ. "ಜ್ಞಾನ ಸಂಬಂಧರ್ ಹಾಗೂ ತಿರುಮಂಗೈ ಆಳ್ವಾರರ ನಡುವೆ ಸಾಹಿತ್ಯಿಕ ರೂಪ ಮತ್ತು ಧಾರ್ಮಿಕ ವಿಚಾರಗಳಲ್ಲಿ ಹೆಚ್ಚಿನ ಸಾಮ್ಯ ಕಂಡುಬರುತ್ತದೆ ಎಂಬ ಅಂಶವನ್ನು 'ದಕ್ಷಿಣ ಭಾರತದ ಒಂದು ಇತಿಹಾಸ' ಎಂಬ ಪುಸ್ತಕದಿಂದ ಆರಿಸಿಕೊಟ್ಟಿದ್ದಾರೆ. ಧರ್ಮದ ಹೆಸರಿನಲ್ಲಿ ಇಂದು ದಹದಹಿಸುತ್ತಿರುವ ದಗ್ಧತೆಗೆ ಪರಿಹಾರವು ಇಲ್ಲಿ ಸಿಗುತ್ತದೆ. ರುದ್ರನ ಕಲ್ಪನೆ, ಶೈವಾಗಮಗಳು, ಜೈನ ಧರ್ಮದ ಬೆಳವಣಿಗೆ ಈ ಮೊದಲಾದುವು ಇಲ್ಲಿ ನಿರೂಪಿತವಾಗಿವೆ. ಇತರರ ಧರ್ಮ ಪ್ರಚಾರವು ಸಾಗುತ್ತಿದ್ದರೂ ಅವರುಗಳಿಗೆ ಅಡ್ಡಿಯಾಗದಂತೆ ಶೈವ ಧರ್ಮ ಸಾಗುತ್ತಿತ್ತು. ಶಿವ, ವಿಷ್ಣು, ಇಂದ್ರ, ಕೃಷ್ಣ ಮೊದಲಾದವರಿಗೂ ದೇವಾಲಯಗಳಲ್ಲಿ ಆಶ್ರಯವು ಸಿಕ್ಕಿತು. ಜನಜೀವನದಲ್ಲಿ ವಿಷಮತೆಯು ವ್ಯಾಪ್ತವಾಗದಂತೆ ಆಧ್ಯಾತ್ಮಿಕ ಶಿಕ್ಷಣವು ಸಾಗುತ್ತಿತ್ತು. ಜೈನ, ಬೌದ್ಧ ಧರ್ಮಗಳು ತಮಿಳು ನಾಡಿನಲ್ಲಿ ಪ್ರವೇಶಿಸಿ ಅವುಗಳ ಅನುಯಾಯಿಗಳು ಕೇವಲ ತಮ್ಮ ಧರ್ಮದ ಪ್ರಚಾರಕ್ಕಾಗಿ ಸಾಹಿತ್ಯವನ್ನು ಸೃಷ್ಟಿ ಮಾಡಿದರೆ ಆಳ್ವಾರರೂ, ನಾಯನ್ಮಾರರೂ ಭಕ್ತಿ ಪ್ರಚೋದಕವಾದ ಸಾಹಿತ್ಯವನ್ನು ಸೃಷ್ಟಿಸಿದರು. ಶೈವ ಭಕ್ತಿಯು ವಿನಾಶವಾಗದೆ ಮುಂದುವರಿದುಕೊಂಡು ಹೋಗುವಂತೆ ಮಾಡಿದ ಮಹಾತ್ಮ ನಂಬಿ.

ನಂಬಿಯ ಹೆಸರಿನ ಬಗ್ಗೆ ವಿಶೇಷವಾಗಿ ವಿಶ್ಲೇಷಿಸಿ ವಿವರಿಸಿದ್ದಾರೆ. ಪೆರಿಯ ಪುರಾಣವು ಆತನನ್ನು ತಂಬಿರಾನ್ ತೋಳನ್ ಎಂದು ಕರೆದಿದೆ. ಈ ಪದದ ಬಳಕೆಯು ಶಾಸನಗಳಲ್ಲಿಯೂ ಕಂಡುಬಂದಿದೆ. ಆರೂರನು ಸಕಲದಕ್ಕೂ ಶಿವನನ್ನೇ ನಂಬಿರುವುದರಿಂದ ಶಿವನು ಆತನಿಗಾಗಿ ಸರ್ವವನ್ನು ಏರ್ಪಡಿಸಿದ್ದಾನೆ. ಈ ಅರ್ಥದಲ್ಲಿ ಶಿವನು ಆತನ ದೂತ, ಗೆಳೆಯ ಎಲ್ಲವೂ ಆಗಿರುವುದನ್ನು ವಿವರಿಸಿ

ದ್ದಾರೆ. ಹತ್ತಾರು ಆಧಾರಗಳಿಂದ ನಂಬಿ ಆರೂರರನ ಕಾಲ ಕ್ರಿ. ಶ. ಏಳನೇ ಶತಮಾನದ ಅಂತ್ಯ ಹಾಗೂ ಎಂಟನೇ ಶತಮಾನದ ಆದಿ ಎಂಬ ನಿರ್ಣಯಕ್ಕೆ ಬಂದಿದ್ದಾರೆ. ತಿರುಮುನೈಪಾಡಿ ನಾಡಿಗೆ ಸೇರಿದ ನಾವಲೂರು ಆತನ ಜನ್ಮಸ್ಥಳ ಎಂದಿದ್ದಾರೆ. ತೇವಾರದ ರಚನೆ, ಆರೂರರನು ರಚಿಸಿದ ತೇವಾರಂ ಇವುಗಳ ಬಗ್ಗೆ ಆತನ ಜೀವನದ ಘಟನೆಗಳೊಡನೆ ವಿವರಣೆ ಕೊಟ್ಟಿದ್ದಾರೆ. ಇಲ್ಲಿ ತೇವಾರಂ ನಿಮಿತ್ತ ಭಕ್ತಿಯ ಹಿರಿಮೆ ಗರಿಮೆಯು ಎದ್ದು ಕಾಣುತ್ತದೆ. ಹಾಡಿನ ಉದ್ದೇಶ ಪರಮಾತ್ಮನ ಸ್ತುತಿಯೇ ಎಂಬ ಅಂಶವನ್ನು ಆರೂರ ನಂಬಿ ಹೇಳುತ್ತಿದ್ದುದನ್ನು ಆತನ ಹಾಡುಗಳಿಂದಲೇ ಲೇಖಕರು ಖಚಿತಪಡಿಸಿದ್ದಾರೆ. ಈ ಸಂಬಂಧದಲ್ಲಿ ಸಂಪೂರ್ಣವಾಗಿ ಪೆರಿಯ ಪುರಾಣವನ್ನು ಪರಿಚಯಿಸಿದ್ದಾರೆ.

ಸಂಸ್ಕೃತದಲ್ಲಿ ಶೌಂದರನ ಕಥೆ ಎಂಬ ಪ್ರಕರಣ. ಹರಿಹರನು ತಮಿಳು ನಾಡಿನ ಅರುವತ್ತು ಮೂವರು ಪುರಾತನರನ್ನು ಕುರಿತು ಕೃತಿ ರಚನೆ ಮಾಡುವ ವೇಳೆಗೆ ಕಥಾ ವಸ್ತುವನ್ನು ಸಂಸ್ಕೃತದಿಂದ ತೆಗೆದುಕೊಂಡಿರಬಹುದೆಂಬ ವಿದ್ವಾಂಸರ ಅಭಿಪ್ರಾಯವನ್ನು ಇಲ್ಲಿ ವಿವೇಚಿಸಲಾಗಿದೆ. ಈ ಪುರಾತನರನ್ನು ಕುರಿತು ಸಂಸ್ಕೃತದಲ್ಲಿ ಆಗಸ್ತ್ಯ ಭಕ್ತ ವಿಲಾಸ, ಉಪಮನ್ಯು ಭಕ್ತವಿಲಾಸ ಎಂಬ ಗ್ರಂಥಗಳು ಬಂದಿವೆ. ವಿದ್ವಾಂಸರ ಅಭಿಪ್ರಾಯವನ್ನು ಈ ಬಗ್ಗೆ ವಿಶ್ಲೇಷಿಸಿ ವಿವೇಚಿಸಿದ್ದಾರೆ. ಶಿವ ರಹಸ್ಯ ಎಂಬ ಮತ್ತೊಂದು ಸಂಸ್ಕೃತ ಕೃತಿಯಲ್ಲೂ ಈ ಭಕ್ತರ ಕಥೆಗಳು ಬಂದಿರುವುದನ್ನು ವಿವೇಚಿಸಿದ್ದಾರೆ. ಈ ಎಲ್ಲ ಗ್ರಂಥಗಳ ತುಲನಾತ್ಮಕ ವಿವರಣೆಯನ್ನು ಕೊಟ್ಟು ಅವುಗಳಲ್ಲಿನ ಪ್ರತಿಯೊಂದು ಪಾತ್ರ ಚಿತ್ರಣ ನೀಡಿದ್ದಾರೆ. ಇದು ಇವರ ಆಳವಾದ ಅಭ್ಯಾಸದ ಸಂಕೇತ ಸೂಚಿಯಾಗಿ ಸಾಗಿದೆ.

ತೆಲುಗಿನಲ್ಲಿ ನಂಬಿಯಣ್ಣನ ಕಥಾ ಪ್ರವಾಹವನ್ನು ಪರಿಚಯಿಸಿದ್ದಾರೆ. ಆಂಧ್ರ ಪ್ರದೇಶ, ತಮಿಳು ದೇಶದ ರಾಜರುಗಳ ಸಂಬಂಧವನ್ನು ತಿಳಿಸಿದ್ದಾರೆ. ತಮಿಳು ಶೈವ ಪುರಾತನರ ಕಥೆಗಳು ಹದಿಮೂರನೆಯ ಶತಮಾನದ ಕೊನೆಯಲ್ಲಿ ಪಾಲ್ಕುರಿಕೆ ಸೋಮನಾಥನ ಮೂಲಕ ಆಂಧ್ರ ದೇಶದಲ್ಲಿ ಹೆಚ್ಚು ಪ್ರಚಾರಕ್ಕೆ ಬಂದಂತೆ ತಿಳಿದು ಬರುತ್ತದೆ ಎಂಬ ಅಂಶವನ್ನು ತೆಲುಗು ಪಂಡಿತಾರಾಧ್ಯ ಚರಿತ್ರೆಯಿಂದ ತೆಗೆದುಕೊಂಡು ಪ್ರಸಕ್ತ ವಿಷಯಕ್ಕೆ ಬಂದಿದ್ದಾರೆ. ಮಲ್ಲಿಕಾರ್ಜುನ

ಪಂಡಿತ ಹಾಗೂ ಪಾಲ್ಕುರಿಕೆ ಸೋಮನಾಥನಿಗೆ ಕಲ್ಯಾಣದ ಶಿವಶರಣರ ಹಾಗೂ ತಮಿಳು ನಾಡಿನ ಅರುವತ್ತು ಮೂರು ಪುರಾತನರ ಬಗೆಗೆ ತಿಳಿದು ಬಂದುದು ಕರ್ಣ ಪರಂಪರೆಯ ಮೂಲಕವಾಗಿ ವಿಷಯ ಸಂಗ್ರಹ ಮಾಡಿದ ಪಾಲ್ಕುರಿಕೆ ಸೋಮನಾಥನು ತನ್ನ ಬಸವ ಪುರಾಣಮು, ಪಂಡಿತಾರಾಧ್ಯ ಚರಿತ್ರೆಗಳಲ್ಲಿ ಆ ಎಲ್ಲವನ್ನೂ ಅಳವಡಿಸಿದಂತಿದೆ. ಇದು ಮೌಖಿಕವಾದ ಕಾರಣ ಬರಹದಲ್ಲಿ ವತ್ಯಾಸ ಬರುವುದು ಸರ್ವ ಸಾಮಾನ್ಯ ಎಂದಿದ್ದಾರೆ. ಈ ತೆಲುಗು ಕಥೆಯಲ್ಲಾ ಗಿರುವ ಬದಲಾವಣೆಗಳನ್ನು ವಿವರಿಸಿದ್ದಾರೆ. ಮೂಲ ಕಥೆಗೆ ಪೂರಕವಾಗಿ ನಂಬಿಯಣ್ಣನ ಕಥೆಯನ್ನು ಹೇಳಿರುವುದರಿಂದ ನಂಬಿಯಣ್ಣನ ಸಮಗ್ರ ವೃತ್ತಾಂತ ನಿರೂಪಗೊಂಡಿಲ್ಲ ಎಂಬ ಹೇಳಿಕೆಯಲ್ಲಿ ಸತ್ಯಾಂಶ ಎದ್ದು ಕಾಣುತ್ತದೆ

ಕನ್ನಡದಲ್ಲಿ ನಂಬಿಯಣ್ಣನ ಕಥೆಯ ಪ್ರಕರಣ ಪ್ರಾರಂಭವಾಗುತ್ತದೆ. ಇಲ್ಲಿ ವಿದ್ಯಾಶಂಕರರ ಸಂಶೋಧನೆಯ ನಿಮಿತ್ತ ಇಲ್ಲಿಯವರೆಗಿದ್ದ ವಿದ್ವಾಂಸರ ಅಭಿಪ್ರಾಯಗಳೆಲ್ಲವೂ ಬದಲಾಗಿವೆ. ಪೆರಿಯ ಪುರಾಣದ ಪ್ರಭಾವ ಹರಿಹರನ ಮೇಲೆ ಆಗಿಲ್ಲ ಎಂಬ ಅಂಶವನ್ನು ಇವರು ಸಮರ್ಥಿಸಿದ್ದಾರೆ. ಹರಿಹರನಿಗೆ ತಮಿಳು ಭಾಷೆಯ ಪರಿಚಯವಿತ್ತೆಂದೂ ಕೂಡ ತಿಳಿಸಿದ್ದಾರೆ. ಡಾ॥ ಟಿ. ಪಿ. ಮೀನಾಕ್ಷಿ ಸುಂದರಂರವರ ಗ್ರಂಥವೊಂದರ ವಾಕ್ಯಗಳನ್ನು ಉದಹರಿಸಿ ಹರಿಹರನು ತಮಿಳಿನ ಶೈವ ಸಂತರ ಜನ್ಮ ಸ್ಥಳಗಳಿಗೆ ಭೇಟಿಕೊಟ್ಟು ಅಲ್ಲಿ ವಿಚಾರ ಪರಂಪರೆ ಯನ್ನು ಪರಿಗ್ರಹಿಸಿ ಕಾವ್ಯ ರಚನೆ ಮಾಡಿರುವುದರಿಂದ ಹರಿಹರನ ನಂಬಿಯಣ್ಣನ ರಗಳೆ, ಅಧಿಕೃತ, ಆಧಾರಿತ ಹಾಗೂ ವಾಸ್ತವಿಕ ಕಾವ್ಯ ಎಂದು ನಿರ್ಧರಿಸಿದ್ದಾರೆ. ಈ ರಗಳೆಯ ರಚನೆಗೆ ತೇವಾರಂಗಳು ಲಿಖಿತ ಆಧಾರವಾದಂತೆಯೇ, ವಾಗ್ ಪರಂಪರೆಯಲ್ಲಿ ಹರಡಿಕೊಂಡಿದ್ದ ಸುಂದರಮೂರ್ತಿಯ ಬಗೆಗಿನ ಐತಿಹ್ಯಗಳು ಅಲಿಖಿತ ಆಧಾರಗಳಾಗಿವೆ ಎಂದು ಲೇಖಕರು ಸ್ಪಷ್ಟಪಡಿಸಿರುವುದು ರಗಳೆಯ ಮೇಲೆ ಹೊಸಬೆಳಕೊಂದು ಚೆಲ್ಲಿದಂತಾಗಿದೆ. ನಂಬಿಯಣ್ಣನ ಬದುಕನ್ನು ಕುರಿತು ಮೊತ್ತಮೊದಲಿಗೆ ಸ್ವತಂತ್ರವಾಗಿ ಒಂದು ಕಾವ್ಯವನ್ನೇ ಬರೆದ ಕೀರ್ತಿ ಹರಿಹರನಿಗೆ ಸೇರಿರುತ್ತದೆ ಎಂಬ ಮಾತನ್ನು ಹೇಳಿ ಹರಿಹರನ ಹಿರಿಮೆ ಗರಿಮೆ ಯನ್ನು ಎತ್ತಿ ಹಿಡಿದಿರುವುದು ಹೆಸರಿಸುವಂತಿದೆ. ಶೇಕ್ಕಿಳಾರ್‌ನಿಗಿಂತ ಸ್ವಾರಸ್ಯ ವಾಗಿ, ಬೇರೆಯಾಗಿ ಬಂದ ವಿಚಾರವು ಹರಿಹರನಲ್ಲಿ ಇರುವುದನ್ನು ನಂಬಿ

ಯಣ್ಣನ ರಗಳೆಯ ಕಥಾ ನಿರೂಪಣೆಯಲ್ಲಿ ತಿಳಿಸಿದ್ದಾರೆ. ಹರಿಹರನು ಸೌಂದರನ ಹಾಡುಗಳನ್ನು ನೋಡಿದ್ದಾನೆ ಎಂಬ ಅಂಶವನ್ನು ಲೇಖಕರು ಖಚಿತಗೊಳಿಸಿದ್ದಾರೆ. ನಂಬಿಯಣ್ಣನ ರಗಳೆಯ 12ನೆ ಸ್ಥಲದ ೮೫–೧೦೦ ಸಾಲುಗಳು ಸೌಂದರನ ಪದಿಕ ೪೭ರ ಕನ್ನಡೀಕರಣವಾಗಿರುವಂತೆ ಕಾಣಬರುತ್ತದೆ. ಶೇಕ್ಕಿಳಾರನಲ್ಲಿ ಇಲ್ಲದ ವಿಚಾರವನ್ನು ವಿವರಿಸಿರುವ ಹರಿಹರನ ಸ್ವತಂತ್ರ ಕಲ್ಪನೆಯನ್ನೂ ಕೂಡ ಲೇಖಕರು ತಿಳಿಸಿದ್ದಾರೆ.

ಬೊಮ್ಮರಸನ ಸೌಂದರ ಪುರಾಣವನ್ನು ವಿಶ್ಲೇಷಿಸಿ ವಿಮರ್ಶಿಸಿದ್ದಾರೆ. ಮೂವರು ಬೊಮ್ಮರಸರ ವಿಚಾರ, ಕಾಲಾದಿ ಸಂಗತಿಗಳನ್ನು ತಿಳಿಸಿ, ಸೌಂದರ ಪುರಾಣದ ಬೊಮ್ಮರಸನ ವಿಚಾರವನ್ನು ಪ್ರಸ್ತಾಪಿಸಿದ್ದಾರೆ. ಹರಿಹರ ಹಾಗೂ ಬೊಮ್ಮರಸರು ತಮ್ಮ ಕೃತಿಗೆ ಹೆಸರಿಡುವುದರಲ್ಲೇ ಭಿನ್ನರಾಗಿರುವುದನ್ನು ಲೇಖಕರು ವಿಸ್ತಾರವಾಗಿ ವಿವರಿಸಿದ್ದಾರೆ. ಈ ಎರಡರಲ್ಲಿನ ಬಗೆಗಳನ್ನೂ ಅಲ್ಲಲ್ಲಿ ತಿಳಿಸಿದ್ದಾರೆ. ರಗಳೆಯಲ್ಲಿ ಚೋಳದೇಶದ ವರ್ಣನೆ ಹಾಗೂ ಅದನ್ನು ಆಳುವ ನರಸಿಂಗ ವೊಡೆಯಾರನ ವರ್ಣನೆ ಒಂದೆರಡು ಸಾಲುಗಳಲ್ಲಿ ಮುಗಿದಿದ್ದರೆ, ಪುರಾಣದಲ್ಲಿ ಇವು ವಿಸ್ತಾರವಾಗಿ ಬಂದಿವೆ ಎಂದು ಹೇಳಿರುವ ಮೂಲಕ ಕವಿಗಳ ಔಚಿತ್ಯ ಜ್ಞಾನವನ್ನು ಪರಿಚಯಿಸಿದ್ದಾರೆ. ಎರಡರಲ್ಲಿ ಸಾಮ್ಯ ವೈಶಮ್ಯಗಳನ್ನೂ ವಿವರಿಸಿದ್ದಾರೆ. ನಂಬಿಯಣ್ಣನಿಗೆ ಪ್ರಾಯ ಪ್ರಾಪ್ತವಾದುದರ ಬಗ್ಗೆ ಆಯಾಯ ಕೃತಿಗಳಿಂದ ಸಾಲುಗಳನ್ನು ತಂದು ಹರಿಹರನ ಸ್ವಂತಿಕೆಯ ಸೊಗಸನ್ನೂ, ಬೊಮ್ಮರಸನ ಸ್ವಂತಿಕೆ ಕಡಿಮೆಯಾಗಿರುವುದನ್ನೂ ತಿಳಿಸಿದ್ದಾರೆ. ಬೊಮ್ಮರಸನ ಮೇಲೆ ಹರಿಹರನ ಪ್ರಭಾವ ಬಿದ್ದಿರುವುದನ್ನು ವೃದ್ಧ ವಿಪ್ರ ವೃತ್ತಾಂತದಲ್ಲಿ ಎತ್ತಿ ತೋರಿಸಿದ್ದಾರೆ. ಹರಿಹರನ ಪ್ರಭಾವಕ್ಕೊಳಗಾಗಿದ್ದರೂ ಬೊಮ್ಮರಸನು ಅಲ್ಲಲ್ಲಿ ಕಥಾ ಭಾಗದಲ್ಲಿ ಸ್ವಾತಂತ್ರ್ಯ ವಹಿಸಿ ಬದಲಾವಣೆ ಮಾಡಿಕೊಂಡಿರುವುದನ್ನೂ ಕೂಡ ತಿಳಿಸಿದ್ದಾರೆ.

ಅಣ್ಣಾಜಿಯ ಸೌಂದರ ವಿಳಾಸ, ಚಿಕ್ಕರಾಜನ ಸೌಂದರ್ಯ ನಂಬೆಣ್ಣನ ಪುರಾಣ, ಶಾಂತವೀರ ದೇಶಿಕನ ಸೌಂದರೇಶ್ವರ ಯಕ್ಷ ಗಾನ – ಈ ಕೃತಿಗಳನ್ನೂ ತುಲನಾತ್ಮಕವಾಗಿ ತಿಳಿಸಿದ್ದಾರೆ. ಕವಿ ಅಣ್ಣಾಜಿಯ ಕಲ್ಪನಾ ಚಿತ್ರವನ್ನು ಕಣ್ಣಿಗೆ ಕಟ್ಟುವಂತೆ ವಿವರಿಸಿದ್ದಾರೆ. ಈ ಕವಿಯು ಹರಿಹರನನ್ನು ಅನುಸರಿಸಿದ್ದರೂ

ಅಲ್ಲಲ್ಲಿ ಹೆಸರುಗಳನ್ನು ಬದಲಾಯಿಸಿಕೊಂಡಿರುವುದನ್ನು ತಿಳಿಸಿದ್ದಾರೆ. ಅರಸು ನರಸಿಂಗ ಮೊನೆಯಾರನು ನಂಬಿಯನ್ನು ದತ್ತು ಪುತ್ರನನ್ನಾಗಿ ಸ್ವೀಕರಿಸುವ ಪ್ರಸಂಗವು ಹರಿಹರನಿಗಿಂತ ಈತನಲ್ಲಿ ಭಿನ್ನವಾಗಿ ಬಂದಿರುವ ಅಂಶವನ್ನು ವಿವರಿಸಿದ್ದಾರೆ. ಈತನ ಅನುಕರಣೆ ಅಷ್ಟಾಗಿ ಅಂದವಾಗಿಲ್ಲ ಎಂದೂ ತಿಳಿಸಿದ್ದಾರೆ. ಹರಿಹರನಲ್ಲಿ ಬಂದಿರದೆ, ಈತನಲ್ಲಿ ಹೊಸದಾಗಿ ಇರುವ ಮಂಗಲೆಗೆ ವಿಪ್ರ ಶ್ರೇಷ್ಠರು ಬೋಧಿಸುವ ವಿಚಾರವನ್ನು ಇಲ್ಲಿ ಎತ್ತಿ ತೋರಿಸಲಾಗಿದೆ. ಹರಿಹರನ ವಸ್ತು ನಿರೂಪಣಾ ವಿಧಾನಕ್ಕೂ, ಅಣ್ಣಾಜಿಯ ವಸ್ತು ನಿರೂಪಣಾ ವಿಧಾನಕ್ಕೂ, ಸಾಕಷ್ಟು ಅಂತರ ವಿರುವುದು ಸ್ಪಷ್ಟವಿದೆ ಎಂಬ ಇವರ ಹೇಳಿಕೆಯು ಇವರ ವಿಮರ್ಶಾ ಜ್ಞಾನದ ಹೆಚ್ಚಳದ ಸಂಕೇತವಾಗಿದೆ. ಚಿಕ್ಕರಾಚನ ಸೌಂದರ್ಯ ನಂಬೆಣ್ಣನ ಪುರಾಣವನ್ನು ಪರಿಚಯಿಸುತ್ತಾರೆ. ಈ ಕಥೆಯನ್ನು ಸಂಗ್ರಹಿಸಿ ಹೇಳಿದ್ದಾರೆ. ಈಗ ದೊರೆತಿರುವ ಈ ಕೃತಿಯು ಅಪೂರ್ಣ ಎಂದು ನಿರ್ಧರಿಸಿದ್ದಾರೆ. ಹರಿಹರನ ಪ್ರಭಾವಕ್ಕೆ ಸಿಗದೆ ಸ್ವತಂತ್ರವಾಗಿ ತನ್ನದೇ ಆದ ಕಥನ ಕ್ರಮದಲ್ಲಿ ಕೃತಿಗಳ ನಿರೂಪಣೆ ಮಾಡಿರುವುದನ್ನು ಸಮರ್ಥಿಸಿದ್ದಾರೆ. ಶಾಂತವೀರ ದೇಶಿಕನ ಸೌಂದರೇಶ್ವರನ ಯಕ್ಷಗಾನ ಒಂದು ವಿಶಿಷ್ಟ ಕೃತಿ ಎಂದು ಹೇಳಿದ್ದಾರೆ.

ವಚನಗಳಲ್ಲಿ ನಂಬಿಯಣ್ಣ ಎಂಬ ಪ್ರಕರಣ ವಾಚಕರು ವಚನಗಳತ್ತ ಧಾವಿಸುವಂತೆ ಮಾಡುತ್ತದೆ. ತಮಿಳು ನಾಡಿನ ಪುರಾತನರ ಬಗ್ಗೆ ವಚನಕಾರರ ನಿಷ್ಠೆ ನಿರಿನಿರಿಯಾಗಿರುವುದನ್ನು ಎತ್ತಿ ತೋರಿಸಿದ್ದಾರೆ. ವಚನಕಾರರು ನಂಬಿಯಣ್ಣನ ಬದುಕಿಗೆ ಸಂಬಂಧಿಸಿದ ಘಟನಾತ್ರಯಗಳನ್ನು ವಿವರಿಸಿದ್ದಾರೆ. ನಂಬಿಯಣ್ಣನ ಸಮಕಾಲೀನರಾದ ಮೆರೆಮಿಂಡ ದೇವರು, ಕಲಿಕಾಮ ದೇವರು, ಸೋಮಾಸಿ ಮಾರರು, ಜಡೆಯ ನಾಯನಾರು–ಯಸ್ಯಜ್ಞಾನಿ ದೇವಿಯರು, ಚೇರಮ, ಪೆರುಮಳಲಿಯ ಕುರುಂಬರು–ಇವರುಗಳ ಸಂಗತಿಯನ್ನು ಸಹ ಕೊಡಲಾಗಿದೆ. ಇದರಿಂದಾಗಿ ಆ ಕಾಲದ ಸಮಕಾಲೀನ ಜೀವನ ಚಿತ್ರವು ದೊರೆತಂತಾಗಿ ಅದು ನಂಬಿಯಣ್ಣನ ಕಥೆಗೆ ಪುಷ್ಟಿ ಕೊಡಲು ಅವಕಾಶವಾಗುತ್ತದೆ. ಈ ಪುರಾತನರ ಬಗ್ಗೆ ಕನ್ನಡದಲ್ಲಿ ಬಂದಿರುವ ಕಾವ್ಯಗಳನ್ನೂ ಕೂಡ ಪರಿಚಯಿಸಿದ್ದಾರೆ. ಉದಾಹರಣೆಗೆ ಚೇರಮನ ಬಗ್ಗೆ ಬಂದಿರುವ ಕನ್ನಡ ಕೃತಿಗಳು. ವಿರುಪರಾಜನ ತ್ರಿಭುವನ

ತಿಲಕ, ಚೇರಮಾಂಕನ ಚೇರಮಕಾವ್ಯ, ಶಂಕರದೇವನ ಪ್ರಸನ್ನ ಶಂಕರಲಿಂಗ ರಗಳೆಗಳು, ಶಾಂತಲಿಂಗ ದೇಶಿಕನ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ–ಇವುಗಳು ತಮ್ಮ ಕಾವ್ಯಗಳಲ್ಲಿ ಚೇರಮನ ಕಥೆಯನ್ನು ತಂದಿರುವ ಕವಿಗಳ ಕೃತಿಗಳನ್ನೂ ಕೂಡ ಹೆಸರಿಸಿ ಆತನ ಹೆಚ್ಚಳವನ್ನು ತಿಳಿಸಿದ್ದಾರೆ.

ಹರಿಹರೇತರ ಕೃತಿಗಳಲ್ಲಿ ನಂಬಿಯಣ್ಣನ ಕಥೆಯು ಬಂದಿರುವುದನ್ನು ತಿಳಿಸಿದ್ದಾರೆ. ಸುರಂಗನ ತ್ರಿಷಷ್ಠಿ ಪುರಾತನ ಚಾರಿತ್ರಂ ಕಾವ್ಯದಲ್ಲಿ ಬರುವ ಸೌಂದರ ನಂಬಿಯ ಕಥೆಯು ಹರಿಹನನ್ನು ಅನುಸರಿಸಿಕೊಂಡು ಬಂದು ಅಲ್ಲಲ್ಲಿ ವ್ಯತ್ಯಾಸವಾಗಿ ಸಾಗಿರುವ ಕಥೆಯನ್ನು ನಿರೂಪಿಸಿದ್ದಾರೆ. ಕವಿಯ ಮೇಲೆ ಹರಿಹರನ ಪ್ರಭಾವ ಬಿದ್ದಿರುವುದನ್ನು ದೃಷ್ಟಾಂತಗಳ ಮೂಲಕ ತಿಳಿಸಿದ್ದಾರೆ. ಗುಬ್ಬಿಯ ಮಲ್ಲಣಾರ್ಯನ ವೀರಶೈವಾಮೃತ ಮಹಾಪುರಾಣದಲ್ಲಿ ಬಂದಿರುವ ನಂಬಿಯಣ್ಣನ ಕಥೆಯನ್ನು ಸರಳ ವಿರಳವಾಗಿ ವಿವರಿಸಿದ್ದಾರೆ. ವಿರಕ್ತ ತೋಂಟದಾರ್ಯನ ಸಿದ್ಧೇಶ್ವರ ಪುರಾಣ, ಶಿವಯೋಗಿ ಸೋಮೇಶ್ವರನ ಅರುವತ್ತು ಮೂವರು ಪುರಾತನರ ಸಾಂಗತ್ಯ. ಪೆಮ್ಮಿಸೆಟ್ಟಿಯ ಗುರು ಭಕ್ತಾಂಡಾರಿ ಚರಿತೆ, ಚಿಕ್ಕ ನಂಜೇಶನ ತೋಂಟದ ಸಿದ್ಧೇಶ್ವರ ಭಾವರತ್ನಾಭರಣ, ವೀರಭದ್ರ ಕವಿಯ ಅರುವತ್ತು ಮೂವರು ಪುರಾಣ ಈ ಕೃತಿಗಳಲ್ಲಿ ಬಂದಿರುವ ನಂಬಿಯಣ್ಣನ ಪ್ರಸಂಗವನ್ನು ಪ್ರವಹಿಸಿರುವುದು ಸ್ಪಷ್ಟವಾಗುತ್ತದೆ. ಪ್ರತಿಯೊಂದು ವಿಚಾರವೂ ತುಲನಾತ್ಮಕವಾಗಿ ವಿವರಿಸಲ್ಪಟ್ಟಿರುವ ವಿಚಾರವಾಹಿನಿಯು ಇಲ್ಲಿ ಪೂರ್ಣ ಕುಂಭವಾಗಿದೆ.

'ಪೆರಿಯಪುರಾಣ ಹಾಗೂ ನಂಬಿಯಣ್ಣನ ರಗಳೆ' ಪ್ರಕರಣವು ಓದುಗರ ಕಣ್ಣನ್ನು ತೆರೆಯಿಸುತ್ತದೆ. ಈ ಸಂಗತಿಯು ಇಲ್ಲಿ ನೂರು ಪುಟಗಳಷ್ಟು ಅಡಕಗೊಂಡಿರುವುದು ಈ ವಿಷಯ ಬಾಹುಳ್ಯದ ಬಂಧುರತೆಯ ಸಂಕೇತವಾಗಿದೆ. ಎರಡರಲ್ಲಿಯೂ ಬಂದಿರುವ ನಂಬಿಯಣ್ಣನ ಕಥೆಯನ್ನು ಬಿಡಿಬಿಡಿಯಾಗಿ, ದಳದಳವಾಗಿ ತುಲನಾತ್ಮಕ ಬಗೆಯಲ್ಲಿ ಲೇಖಕರು ಚಿತ್ರಿಸಿದ್ದಾರೆ. ಇಲ್ಲಿ ಯಾವ ಬಗೆಯಲ್ಲಿಯೂ ಪೂರ್ವಾಗ್ರಹವಿಲ್ಲದ ವಿಶ್ಲೇಷಣೆ ವಿಚಾರ ವಿಹರಿಸಿದೆ. "ಶೇಕ್ಕಿಳಾರನಾಗಲೀ, ಅವನ ನಂತರದ ತಮಿಳು ಕವಿಗಳಾಗಲೀ ಸುಂದರಮೂರ್ತಿಯ ಬದುಕನ್ನು ತನಿಯಾಗಿ ಕಾವ್ಯಕ್ಕೆ ವಸ್ತುವಾಗಿ ಸ್ವೀಕರಿಸಿದಂತೆ ತೋರುವುದಿಲ್ಲ.

ಚದುರಿ ಹೋಗಿದ್ದ ಸುಂದರಮೂರ್ತಿಯ ಜೀವನ ವೃತ್ತಾಂತವನ್ನು ಹಲವಾರು ಮೂಲಗಳಿಂದ ಕಲೆಹಾಕಿ ಕೃತಿರಚನೆ ಮಾಡಿದ ಶ್ರೇಯಸ್ಸು ಹರಿಹರನದು, ಮೇಲಾಗಿ ಕನ್ನಡದ್ದು" ಎಂಬ ತಮ್ಮ ನಿಲುವನ್ನು ಪ್ರಸ್ತಾಪಿಸಿ, ಕನ್ನಡದ ತನ್ನತನವನ್ನು ಎತ್ತಿ ಹಿಡಿದಿದ್ದಾರೆ. ಈ ಉಭಯ ಕೃತಿಗಳಲ್ಲಿ ಬಂದಿರುವ ಸುಂದರ ಮೂರ್ತಿಯ ಪ್ರಸ್ತಾಪವು ಪ್ರವಾಹ ಪೂರವಾಗಿದೆ. ಇದರ ವಿವರಣೆ ತುಲನಾತ್ಮಕವಾಗಿ ಪೆರಿಯ ಪುರಾಣದ ಪ್ರಭಾವ ಹರಿಹರನ ಪುರಾತನ ರಗಳೆಗಳ ಮೇಲೆ ಖಂಡಿತಾ ಆಗಿಲ್ಲ ಎಂದು ಸಕಾರಣವಾಗಿ ಸವಿಸ್ತಾರವಾಗಿ ತೋರಿಸಿಕೊಟ್ಟಿದ್ದಾರೆ. ಪೆರಿಯ ಪುರಾಣದಲ್ಲಿ ಕಥೆಯು ನೇರವಾಗಿ ಪ್ರಸ್ತಾಪಿತ ವಾಗಿಲ್ಲ, ಹರಿಹರನ ರಗಳೆಗಳಲ್ಲಿ ನೇರವಾಗಿ ಪ್ರಸ್ತಾಪಿಸಲ್ಪಟ್ಟಿದೆ ಎಂದುಸಮರ್ಥಿ ಸಿದ್ದಾರೆ. ನಂಬಿಯಣ್ಣನ ಕಥೆಯಲ್ಲಿನ ಮದ್ದಾನೆ ಪ್ರಸಂಗವು ತಮಿಳು ಹಾಗೂ ಸಂಸ್ಕೃತ ಕೃತಿಗಳಲ್ಲಿ ಬಂದಿಲ್ಲ. ಲೇಖಕರು ಇಲ್ಲಿ ಪ್ರತಿಪಾದಿಸಿರುವ ಪ್ರತಿ ಯೊಂದು ವಿಷಯವೂ ತರ್ಕಬದ್ಧವಾಗಿವೆ, ಸಮಂಜಸವಾಗಿವೆ. ಶೇಕ್ಕಿಳಾರನಿ ಗಿಂತ ಹರಿಹರನಲ್ಲಿ ಹೆಚ್ಚಾಗಿ ವಾಸ್ತವಿಕತೆಯು ವಿಹರಿಸಿದೆ. ಹರಿಹರನ ತಿರುನಾಳ ವೈಭವದ ವರ್ಣನೆಯೇ ಇದರ ನಿದರ್ಶನವೊಂದಾಗಿದೆ. ಹರಿಹರನ ನಾಟಕೀ ಯತೆಯ ಪ್ರತಿಭೆಯು ಶೇಕ್ಕಿಳಾರನಲ್ಲಿ ಇಲ್ಲ ಎಂಬುದನ್ನು ಉದಹರಿಸಿ ತಿಳಿಸಿ ದ್ದಾರೆ. ನಂಬಿಯಣ್ಣನ ರಗಳೆಯ ಸಮೀಕ್ಷೆಯ ವ್ಯಾಜಾಂತರದಿಂದ ವಿದ್ಯಾಶಂಕರರು ಕನ್ನಡದ ಸ್ವಂತಿಕೆಯ ಸೊಗಸನ್ನು, ಸೊಂಪನ್ನು ಸೂರೆಗೈದು ಕನ್ನಡಿಗರಿಗೆ ಕನ್ನಡತನದ ಹೆಚ್ಚುಗಾರಿಕೆಯನ್ನು ಈ ಮೂಲಕ ವಿವರಿಸಿ ಕನ್ನಡಿಗರ ಅಭಿಮಾನ ನೆಗೆ ಪಕ್ಕಾಗಿದ್ದಾರೆ.

ಉಪಸಂಹಾರದಲ್ಲಿ ತಾವು ನಡೆಸಿದ ಅಧ್ಯಯನದ ಸಾರಾಯ ಸಾರವನ್ನು ವಿದ್ಯಾಶಂಕರರು ತಿಳಿಸಿದ್ದಾರೆ. ಆರು ಮುಖ್ಯ ಸಂಗತಿಗಳನ್ನು ತಿಳಿಸಿದ್ದಾರೆ. ತಮಿಳುನಾಡಿನ ಭಕ್ತಿಪ್ರಧಾನವಾದ ಸಾಮೂಹಿಕ ಚಳುವಳಿಯು ರೂಪುಗೊಂಡು ಹೊರಗಿನಿಂದ ಬಂದ ಬೌದ್ಧ ಜೈನ ಧರ್ಮಗಳನ್ನು ಉಚ್ಚಾಟಿಸುವಲ್ಲಿ ನಾಯ ನ್ಮಾರರು ಹಾಗೂ ಆಳ್ವಾರರು ವಹಿಸಿದ ಪಾತ್ರ ದೊಡ್ಡದರಲ್ಲಿ ದೊಡ್ಡದು. ಸೌಂದರ ನಂಬಿಯ ಕಥೆ ವಿವಿಧ ಭಾಷೆಗಳಲ್ಲಿ ಬಂದಿರುವುದು, ತೇವಾರಂಗಳ ಸಹಾಯದಿಂದ. ನಂಬಿಯ ಬದುಕನ್ನು ಅರ್ಥೈಸುವುದು, ಇತರ ಸಾಹಿತ್ಯಗಳಲ್ಲಿ

ಬಂದಿರುವ ನಂಬಿಯಣ್ಣನ ಕಥೆಯು ಹಿನ್ನೆಲೆಯಲ್ಲಿ ಕನ್ನಡದಲ್ಲಿ ನಂಬಿಯಣ್ಣನ ಕಥೆಯ ಪ್ರಾಪ್ತಿ. ಶಿವ ಶರಣರ ವಚನಗಳು, ಹರಿಹರನ ಪುರಾತನ ರಗಳೆಗಳು, ನಂಬಿಯಣ್ಣನ ಬಗ್ಗೆ ಕನ್ನಡದಲ್ಲಿನ ಸ್ವತಂತ್ರ ಕೃತಿಗಳು, ನಂಬಿಯಣ್ಣನ ರಗಳೆಯ ರಚನೆಯಲ್ಲಿ ಹರಿಹರನಿಗೆ ದೊರಕಿದ ಪ್ರಭಾವ–ಪ್ರೇರಣೆ, ಹರಿಹರನ ರಗಳೆಗಳಿಗೆ ಯಾವ ಬಗೆಯಲ್ಲೂ ಪೆರಿಯ ಪುರಾಣ ಆಕರವಾಗಿಲ್ಲ–ಈ ಎಲ್ಲ ವಿಷಯವನ್ನು ವಿದ್ಯಾಶಂಕರರು ಸಮರ್ಥನೀಯವಾಗಿ ಸಾಧಿಸಿ ಕಾರ್ಯ ಮಾಡಿದ ಪರಿಣಾಮವೇ "ನಂಬಿಯಣ್ಣ– ಒಂದು ಅಧ್ಯಯನ" ಕೃತಿ ಕನ್ನಡಿಗರಿಗೆ ಲಭಿಸಿದೆ.

ಕಾವ್ಯದ ಕಥಾ ನಾಯಕನನ್ನು ಕುರಿತು ಬಂದಿರುವ ಸಮೀಕ್ಷೆಯ ವ್ಯಾಜಾಂತರದಿಂದ ಕೃತಿಯು ಇದೇ ಮೊಟ್ಟ ಮೊದಲನೆಯದೆಂದು ನನಗೆ ಕಂಡು ಬರುತ್ತದೆ. ಈ ಬಗ್ಗೆ ಎಲ್ಲೆಲ್ಲಿಯೋ ಅಡಗಿಕೊಂಡಿದ್ದ ಸಂಗತಿಗಳನ್ನು ಗಣಿಯಲ್ಲಿದ್ದ ಅದಿರುಗಳನ್ನು ತೆಗೆದು ಕಾರ್ಯಗೈಯುವಂತೆ ನಂಬಿಯಣ್ಣನ ಬಗ್ಗೆ ದೀರ್ಘ ಪರಿಶ್ರಮಗೈದು ಕಾರ್ಯ ಮಾಡಿರುವ ಸಂಶೋಧನಾ ಸಾಹಿತಿಗಳಲ್ಲಿ ಇವರೇ ಮೊಟ್ಟ ಮೊದಲನೆಯವರೆಂದು ಕಂಡುಬರುತ್ತದೆ. ತಮಿಳುನಾಡಿನ ವಿಶ್ವವಿದ್ಯಾನಿಲಯವು 1985 ರ ಶ್ರೇಷ್ಠ ಕೃತಿಯೆಂದು ಇದನ್ನು ಗೌರವಿಸಿ ಮೊದಲನೆ ಬಹುಮಾನವಾಗಿ ಐದು ಸಾವಿರ ರೂ.ಗಳನ್ನೂ ಪ್ರಶಸ್ತಿ ಪತ್ರವನ್ನೂ ನೀಡಿತು ನೆರೆಯ ರಾಜ್ಯ. ಕನ್ನಡೇತರ ಭಾಷೆಯ ವಿಶ್ವವಿದ್ಯಾನಿಲಯವು ಕನ್ನಡಿಗರೊಬ್ಬರನ್ನು ಗೌರವಿಸಿರುವುದು ಅಖಂಡ ಕನ್ನಡ ಸಾಹಿತ್ಯಕ್ಕೆ ಸಂದ ಗೌರವವಾಗಿದೆ. ಈ ಮಾಹಿತಿಯನ್ನು ಮನಗಂಡು ರಾಜ್ಯದ ಯಾವ ವಿಶ್ವವಿದ್ಯಾನಿಲಯದವರು ವಿದ್ಯಾಶಂಕರರವರಿಗೆ ಡಿ. ಲಿಟ್. ಗೌರವವನ್ನು ನೀಡಿ, ಸಂಶೋಧಕ ಸಾಹಿತಿಗಳ ಸತ್ವಕ್ಕೆ ಬೆಲೆ ಕೊಟ್ಟು ಕಾರ್ಯ ಮಾಡಿದಾಗಲೇ ಆ ವಿಶ್ವವಿದ್ಯಾನಿಲಯವು ತನ್ನ ಘನತೆಯನ್ನು ಘನೀಭೂತವಾಗಿರಿಸಿಕೊಂಡಂತಾಗಿರುತ್ತದೆ. ಹಾಗೆ ಮಾಡದಿದ್ದಲ್ಲಿ ಹಿತ್ತಲ ಗಿಡ ಮದ್ದಲ್ಲ ಎಂಬ ಗಾದೆಯನ್ನು ಈ ವಿಶ್ವವಿದ್ಯಾನಿಲಯಗಳು ಕಾರ್ಯಗತ ಮಾಡಿದಂತೆಯೇ ಎಂದು ಅನಿವಾರ್ಯವಾಗಿ ಹೇಳಬೇಕಾಗಿದೆ

ಆಧಾರಾತ್ಮಕವಾದ, ಚಿಂತನ ಮಂಥನದ ಬೌದ್ಧಿಕ ಕಾರ್ಯದ ಫಲವಾದ, ತುಲನಾತ್ಮಕವಾದ, ತರ್ಕಬದ್ಧವಾದ, ವಿಚಾರ ಸರಣೀಕೃತವಾದ, ಪ್ರತಿಭೆ ಪಾಂಡಿತ್ಯ ಸಮ್ಮಿಳಿತವಾದ, ವಿದ್ಯಾಪ್ರಾಚುರ್ಯವಾದ, ಸಂಸ್ಕೃತಿ ಸಾರ ಗರ್ಭೀಕೃತವಾದ ವಿಚಾರಣೀಯ ಕೃತಿಯಾದ "ನಂಬಿಯಣ್ಣ–ಒಂದು ಅಧ್ಯಯನ" ವನ್ನು ಆದರಿಸದೆ ಹೋದಲ್ಲಿ ಸಾರಸ್ವತ ಜಗತ್ತಿಗೆ ಅತ್ಯಂತ ದೊಡ್ಡ ನಷ್ಟವಾದಂತೆಯೇ ಸರಿ. ಇದು ರಾಜ್ಯ ಕೇಂದ್ರ ಸಾಹಿತ್ಯ ಅಕಾಡೆಮಿಗಳಿಗೂ ಅನ್ವಯವಾಗುತ್ತದೆ.



# ಹಳಗನ್ನಡ
# ವ್ಯಾಕರಣಗಳ ತೌಲನಿಕ ವಿಶ್ಲೇಷಣೆ



**ಶ್ರೀ ದೊಡ್ಡಸ್ವಾಮಿ, ಎಂ.ಎ.,**
ಸಂಸ್ಕೃತ ಕೋವಿದ, ಹಿಂದಿ ಭಾಷಾರತ್ನ
ಕನ್ನಡ ರೀಡರ್
ಸರ್ಕಾರಿ ಕಲಾ ಕಾಲೇಜು
ತುಮಕೂರು.

ಮಾನವನ ಬಳಕೆಯಲ್ಲಿದ್ದ ಧ್ವನಿಪೂರ್ಣ ಸಂಕೇತವು ಕ್ರಮ ಕ್ರಮೇಣ ಮನುಜನ ಬುದ್ಧಿಯು ಪ್ರವೃದ್ಧಿಯಾದಂತೆಲ್ಲ ನೂತನ ಸಂಶೋಧನಾ ಚಾತುರ್ಯ ಪರಿಮಾಣ ವಶದಿಂದ ನಿಯಮವನ್ನೂ, ಹೊಸ ಹೊಸ ಸ್ವರೂಪವನ್ನೂ ಪಡೆಯತೊಡಗಿತು. ಇದು ಭಾಷಾ ಸ್ವರೂಪವನ್ನು ತಾಳಿತು. ನೆನಪು, ನಂತರ ಲಿಪಿ, ಅನಂತರ ಭಾಷೆಯು ಮೈದಾಳಿತು. ಕಾಲವಾಹಿನಿಯು ಪ್ರವಹಿಸಿದಂತೆ ಅನೇಕ ಸ್ಥೂಲ ಸೂಕ್ಷ್ಮ ವ್ಯತ್ಯಾಸಗಳು ಭಾಷೆಯಲ್ಲಿ ಉಂಟಾಗುತ್ತಾ ಬಂದ ಕಾರಣದಿಂದ ಭಾಷಾಧಾರ ಭೂತವಾಗಿ ಶಬ್ದಗಳ ಸ್ವಪ್ರ್ಮವತ್ ಪ್ರಯೋಗಾನು ಷ್ಠಾನಗಳನ್ನು ವಿದ್ವನ್ಮಂಡಲಿಯ ಮಂದಿಯು ರೂಢಿಗೆ ತರಲು ಮೊದಲು ಮಾಡಿದರು. ತತ್ಪರಿಣಾಮವಾಗಿ ಶಬ್ದಗಳ ಪರಿಶುದ್ಧ ಪ್ರಯೋಜನಗಳನ್ನು ಅನಭಿಜ್ಞರಿಗೆ ಬೋಧಿಸಲು ಶಬ್ದಶಾಸ್ತ್ರಗಳನ್ನು ರಚಿಸಲು ಪ್ರಾರಂಭಿಸಿದರು. ಅಪಶಬ್ದಗಳನ್ನು ಪ್ರಯೋಗಿಸುವುದರಿಂದ ಅನಿಷ್ಟ ಪ್ರಾಪ್ತಿ ಎಂದು ಜನಗಳಲ್ಲಿ ಮನೋಭಾವವು ಮೂಡಿದ್ದ ಕಾರಣ 'ಏಕ ಶಬ್ದಃ ಸುಷ್ಠು ಪ್ರಯುಕ್ತಃ ಸಮ್ಯಗ್ ಜ್ಞಾತಃ ಸ್ವರ್ಗೇ ಲೋಕೇ ಕಾಮ ದುಗ್ಭವತಿ' ಎಂದು ಸಾಹಿತ್ಯ ಶಾಸ್ತ್ರಜ್ಞರು ಹೇಳಿರುತ್ತಾರೆ. ಆದಕಾರಣ ಭಾಷೆಯ ಪರಿಶುದ್ಧತೆಗಾಗಿ ಶಬ್ದಶಾಸ್ತ್ರ

ರಚನೆಯು ಅತ್ಯಗತ್ಯವಾಯಿತು. ಈ ರೀತಿ ರಚಿತವಾದ ಶಬ್ದಶಾಸ್ತ್ರದಲ್ಲಿ ಶಬ್ದಗಳ ಪ್ರಯೋಗಾರ್ಹವಾದ ಸಾಧು ಸ್ವರೂಪವನ್ನು ತಿಳಿಸುವ ಕಾರಣ 'ವ್ಯಾಕ್ರಿಯಂತೇ ವ್ಯುತ್ಪಾದ್ಯಂತೇ ಅಸಾಧುಭ್ಯೋ ವಿವಿಚ್ಯ ಭೋದ್ಯಂತೇ ಯತ್ರ' ಎಂಬ ವ್ಯುತ್ಪತ್ತಿಯಂತೆ ಆ ಶಬ್ದಶಾಸ್ತ್ರವೇ ವ್ಯಾಕರಣವಾಗಿದೆ. ವಿ + ಅ + ಕರಣ → ವ್ಯಾಕರಣ ಆಗಿದೆ. ಧರ್ಮಶಾಸ್ತ್ರ, ಕಾಮಂದಕಾದಿ ಅರ್ಥಶಾಸ್ತ್ರ ಮತ್ತು ಮೋಕ್ಷಶಾಸ್ತ್ರ ಮೊದಲಾದ ಸಕಲ ಶಾಸ್ತ್ರಗಳೂ ಶಬ್ದ ನಿಬಂಧನೆಯಿಂದಲೇ ಆಗಬೇಕಾಗಿರುವ ಕಾರಣ ವ್ಯಾಕರಣದ ಮಹತಿಯು ಅತಿಶಯವಾಗಿದೆ. ಜಗತ್ತಿನ ಸಕಲ ವ್ಯವಹಾರಗಳಿಗೂ ಹಾಗೂ ಸಕಲ ಶಾಸ್ತ್ರಗಳಿಗೂ ಶಬ್ದಾರ್ಥ ನಿರ್ಣಯವು ವ್ಯಾಕರಣದಿಂದಲೇ ಉಂಟಾಗುವುದೆಂದು ಪ್ರಾಚೀನಾಚಾರ್ಯರು ತಿಳಿಸಿದ್ದಾರೆ. ಮೊದಲು ಭಾಷೆ ಅನಂತರ ವ್ಯಾಕರಣಗಳಿವೆ. ವ್ಯಾಕರಣವು ಪ್ರಯೋಜನಕಾರಿಯು. "ವ್ಯಾಕರಣವು ಭಾಷೆಗೆ ಸಂಸ್ಕಾರವನ್ನು ಒದಗಿಸುತ್ತದೆ; ಬರವಣಿಗೆ ಶೈಲಿಯು ಕುದುರಲು ಸಹಾಯವಾಗುತ್ತದೆ; ಸಾಹಿತ್ಯಕ್ಕೆ ಮೂರ್ತ ಸ್ವರೂಪವನ್ನು ನೀಡುತ್ತದೆ." ಲೋಕಕ್ಕೆ ಹಿತಕಾರಿಯಾದ ಜ್ಞಾನವನ್ನು ಹೆಚ್ಚಿಸಲು ಆಧಾರವಾದುದೇ ಶಾಸ್ತ್ರ. 'ಯಸ್ಯ ನಾಸ್ತಿ ಸ್ವಯಂ ಪ್ರಜ್ಞಾ ತಸ್ಯ ಶಾಸ್ತ್ರಂ ಕರೋತಿ ಕಿಂ' ಎಂಬಂತೆ ಜ್ಞಾನವೆ ಇಲ್ಲದಿರುವಲ್ಲಿ ಶಾಸ್ತ್ರವು ಕೂಡ ನಿರರ್ಥಕವಾಗುವ ಕಾರಣ ಶಾಸ್ತ್ರ ಮತ್ತು ಜ್ಞಾನಗಳೆರಡೂ ಅವಿನಾಭಾವಿ ಸಂಬಂಧವುಳ್ಳವುಗಳಾಗಿವೆ. ಇದರಲ್ಲಿ ಅತ್ಯಂತ ಮಹತ್ವವಿರುವ ಶಾಸ್ತ್ರವೆಂದರೆ ವ್ಯಾಕರಣ. ಜಗತ್ತಿನ ಸಕಲ ವ್ಯವಹಾರಗಳಿಗೂ ಶಬ್ದಾರ್ಥಗಳ ನಿರ್ಣಯವೇ ಮೂಲವಾಗಿದೆ. ಆ ಶಬ್ದಗಳ ನಿರ್ಣಯವು ವ್ಯಾಕರಣದಿಂದಲೇ ಉಂಟಾಗುತ್ತದೆ.

> ಸರ್ವೇಷಾಂ ವ್ಯವಹಾರಾಣಾಂ ಮೂಲ ಶಬ್ದಾರ್ಥ ನಿರ್ಣಯಃ ।
> ಸಚವ್ಯಾಕರಣಾದೇವ ಮುನಿಭಿಸ್ತೇನ ತತ್ಕೃತಂ ॥

ಈ ವ್ಯಾಕರಣವನ್ನು ಕಲಿಯುವುದರಿಂದ ಶಬ್ದಗಳನ್ನು ಶುದ್ಧವಾಗಿ ಉಚ್ಚರಿಸುವಂತಾಗಿ ಅದರಿಂದ ಸದ್ಗತಿಯು ಪ್ರಾಪ್ತವಾಗುವುದೆಂಬುದು ಭಾರತೀಯ ಆಧ್ಯಾತ್ಮಿಕ ಕ್ಷೇತ್ರದ ನಂಬಿಕೆಯಾಗಿದೆ. ಭಾರತೀಯ ಶಾಸ್ತ್ರಜ್ಞರು ಯಾವುದೇ ಶಾಸ್ತ್ರವನ್ನು ಬರೆಯಲಿ, ಅದರಿಂದ ಮೋಕ್ಷ ಪ್ರಾಪ್ತಿಯಾಗುವುದೆಂಬುದು ಅವರ

ಧೃಢ ನಂಬಿಕೆಯಾಗಿದೆ. ಅದೇ ಸಂಪ್ರದಾಯವು ವ್ಯಾಕರಣಕ್ಕೂ ಅನುಸರಿಸಿ ಬಂದಿದೆ.

ವ್ಯಾಕರಣಾತ್ ಪದ ಸಿದ್ಧಿಃ ಪದಸಿದ್ಧೇರರ್ಥ ನಿರ್ಣಯೋಃ ಭವತಿ ।
ಅರ್ಥಾತ್ ತತ್ತ್ವಜ್ಞಾನಂ ತತ್ತ್ವ ಜ್ಞಾನಾತ್ ಪರಂ ಶ್ರೀಯಃ ॥

ವ್ಯಾಕರಣದಿಂದೆ ಪದಮಾ ।
ವ್ಯಾಕರಣದ ಪದದಿನರ್ಥಮರ್ಥದೆ ತತ್ತ್ವಾ ॥
ಲೋಕಂ ತತ್ತ್ವಾಲೋಕದಿ ।
ನಾಕಾಂಕ್ಷಿಪ ಮುಕ್ತಿಯಕ್ಕುಮದೆ ಬುಧರ್ಗೆ ಫಲಂ ॥

ಇದರಿಂದ ವ್ಯಾಕರಣದ ರಚನೆಯಲ್ಲಿಯೂ ಆಧ್ಯಾತ್ಮದ ಉದ್ದೇಶ ಅಡಗಿದೆ ಎಂಬುದು ವ್ಯಕ್ತವಾಗುತ್ತದೆ.

ಇತರ ಭಾಷೆಗಳಲ್ಲಿರುವಂತೆಯೇ ಕನ್ನಡ ಭಾಷೆಯಲ್ಲೂ ಪ್ರಾಚೀನ ಕಾಲದಿಂದಲೂ ವ್ಯಾಕರಣ ಪರಂಪರೆಯು ಬೆಳೆದು ಬಂದಿದೆ. ನಾಗವರ್ಮನ ಶಬ್ದಸ್ಮೃತಿ ಮತ್ತು ಭಾಷಾಭೂಷಣ, ಕೇಶೀರಾಜನ ಶಬ್ದಮಣಿ ದರ್ಪಣಂ ಮತ್ತು ಭಟ್ಟಾಕಳಂಕನ ಶಬ್ದಾನುಶಾಸನ–ಇವುಗಳೇ ಕನ್ನಡದ ವ್ಯಾಕರಣಗಳು. ಕನ್ನಡಿಗರು ಕಾವ್ಯಗಳನ್ನು ರಚಿಸಿದಂತೆಯೇ ವ್ಯಾಕರಣಗಳನ್ನು ರಚಿಸಬಲ್ಲರು ಎಂಬ ಅಂಶವನ್ನು ಎದೆಗಾರಿಕೆಯಿಂದ ಎತ್ತಿ ತೋರಿಸಿದವನು ನಾಗವರ್ಮ. ಕನ್ನಡಕ್ಕೂ ತನ್ನದೇ ಆದ ಸ್ವತಂತ್ರ ಮತ್ತು ಪ್ರಮಾಣ ಬದ್ಧವಾದ ವ್ಯಾಕರಣವಿದೆ ಎಂಬ ಅಂಶವನ್ನು ಕನ್ನಡೇತರರಿಗೆ ಕಾರ್ಯ ಮೂಲಕ ವ್ಯಕ್ತಪಡಿಸಿದ ವೈಯ್ಯಾಕರಣಿ ಕೇಶೀರಾಜನು. ಸಂಸ್ಕೃತ ಭಾಷಾ ಜೀವಿಗಳು ಇತರ ಭಾಷಾ ಜೀವಿಗಳನ್ನು ತೆಗಳುತ್ತಿರುವುದನ್ನು ಕಂಡು ಕೆರಳಿದ ಭಟ್ಟಾಕಳಂಕನು ಅವರ ಮುಖಕ್ಕೆ ಮಂಗಳಾರತಿ ಮಾಡಿದರು. ಸಂಸ್ಕೃತ ಭಾಷೆಯಂತೆ ಕನ್ನಡ ಭಾಷೆಯು ಸಕಲ

ದೇಶ ಪ್ರಸಿದ್ಧವೂ ಸಕಲ ಶಾಸ್ತ್ರೋಪಯೋಗಿಯೂ, ಸಕಲ ಮಹಾಜನ ಪರಿಗ್ರಾಹ್ಯವೂ ಆಗಿರುವಂತೆಯೂ ಅನುಶಾಸನಕ್ಕರ್ಹವಾಗಿದೆಯೆಂದೂ ಜೈನಾಗಮದ ಬಗೆಯಿಂದ ಸಿದ್ಧಗೊಳಿಸಿ ಭಟ್ಟಾಕಳಂಕನು ನಿಂದಕರ ಬಾಯನ್ನು ಮುಚ್ಚಿಸಿದನು ಈ ಬಗೆಯಲ್ಲಿ ಕನ್ನಡವೂ ಶಬ್ದಶಾಸ್ತ್ರ ಪ್ರಯೋಗದಲ್ಲಿಯೂ ಹೆಸರಿಸುವಂತೆ ಕೆಲಸ ಮಾಡಿದೆ. ಈ ಹಳೆಗನ್ನಡ ವ್ಯಾಕರಣಗಳನ್ನು ಆಳವಾಗಿ ಅಭ್ಯಸಿಸಿ ಕನ್ನಡದ ಕಂಪು ಪೆಂಪು ಸೊಂಪು ಕನ್ನಡ ವ್ಯಾಕರಣದಿಂದ ವ್ಯಾಪ್ತಿಯಾಗಿರುವುದನ್ನು ಕನ್ನಡಿಗರಿಗೆ ತಿಳಿಸಲು ಅತ್ಯಂತ ಶ್ರಮವಹಿಸಿ ಜನೋಪಕಾರ ಕಾರ್ಯವನ್ನು ಕೈಗೊಂಡ ಕಾರಣದಿಂದಾಗಿ ಹಳಗನ್ನಡ ವ್ಯಾಕರಣಗಳ ತೌಲನಿಕ ವಿಶ್ಲೇಷಣೆ ಎಂಬ ಶಿರೋನಾಮೆಯ ಬೃಹದ್ಗ್ರಂಥವನ್ನು ಸಮ್ಯಕ್ ಸಾಹಿತಿಗಳಾದ ಶ್ರೀದೊಡ್ಡಸ್ವಾಮಿಯವರು ಕನ್ನಡಿಗರಿಗೆ ಕೊಟ್ಟಿದ್ದಾರೆ. ಈಗಾಗಲೇ 'ಶಬ್ದಮಣಿ ದರ್ಪಣ ದಿಗ್ದರ್ಶನ' ಎಂಬ ವ್ಯಾಖ್ಯಾನ ಕೃತಿಯನ್ನು ಕನ್ನಡಿಗರಿಗೆ ಕೊಟ್ಟು ಇವರು ತಮ್ಮ ವ್ಯಾಕರಣ ವಿದ್ವತ್ತನ್ನು ವ್ಯಕ್ತಪಡಿಸಿದ್ದಾರೆ. ಕೋಲಾರದಲ್ಲಿನ ಸರಕಾರಿ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಾ ಸಮ್ಯಕ್ ಸಾಹಿತ್ಯ ದರ್ಶನ ವಿಮರ್ಶಾ ರಚನೆಯಲ್ಲಿ ತೊಡಗಿರುವುದು ಇವರ ಸಾಂಸ್ಕೃತಿಕತೆಯ ಸಂಕೇತವಾಗಿದೆ. ಇವರ 'ಕನ್ನಡ ವ್ಯಾಕರಣಗಳ ತೌಲನಿಕ ವಿಶ್ಲೇಷಣೆ'ಕೃತಿ ಡಾಕ್ಟರೇಟ್ ಪದವಿಯನ್ನು ಪಡೆಯಲುಅರ್ಹವಾದಮಹತ್ವ ಪೂರಿತಗ್ರಂಥವಾಗಿದೆ.

ಈ ಗ್ರಂಥದಲ್ಲಿ ಆರು ಪ್ರಕರಣಗಳಿವೆ. ಪ್ರತಿಯೊಂದು ಪ್ರಕರಣದಲ್ಲಿಯೂ ಅಲ್ಲಲ್ಲಿ ಉಪಪ್ರಕರಣಗಳೂ ಇವೆ. ವ್ಯಾಕರಣ ಸೂತ್ರದ ಉದಾಹರಣೆಗಳನ್ನಾಗಿ ವಿಕ್ರಮಾರ್ಜುನ ವಿಜಯಂ, ಗದಾಯುದ್ಧಂ ಮೊದಲಾದ ಕಾವ್ಯಗಳ ಪದ್ಯಗಳನ್ನು ಇಲ್ಲಿ ಬಳಸಲಾಗಿದೆ. ಸಂಸ್ಕೃತ ಮತ್ತು ಕನ್ನಡಕ್ಕೆ ಜನನಿ ಜನ್ಯ ಸಂಬಂಧವಿದ್ದರೂ ಸಂಸ್ಕೃತ ಜನ್ಯವಾದ ಕನ್ನಡ ಭಾಷೆಯು ಹಲವಾರು ವಿಷಯಗಳಲ್ಲಿ ಸಂಸ್ಕೃತಕ್ಕಿಂತ ಕನ್ನಡವು ಭಿನ್ನವಾಗಿದೆ ಎಂಬ ಅಂಶವನ್ನು ಮೂವರು ವೈಯಾಕರಣಿಗಳೂ ತಮ್ಮ ಗ್ರಂಥಗಳಲ್ಲಿ ನಿರೂಪಿಸಿದ್ದಾರೆ ಎಂದು ಗ್ರಂಥಕರ್ತರು ಹೇಳಿರುವುದು ಅವರ ಬಿಚ್ಚು ಹೃದಯವನ್ನು ಸೂಚಿಸುತ್ತದೆ. ಎರಡನೆಯ ನಾಗವರ್ಮ, ಕೇಶಿರಾಜ ಮತ್ತು ಭಟ್ಟಾಕಳಂಕ ಇವರುಗಳ ಗ್ರಂಥಗಳ ಸೂಕ್ತಿಗಳನ್ನು ತುಲನಾತ್ಮಕವಾಗಿ ನೀಡಿ ಅವುಗಳ ಸಮ್ಯಕ್ ವಿಮರ್ಶೆ

ಮಾಡಿ ವ್ಯಾಕರಣದ ಬಗ್ಗೆ ನಿಖರವಾದ ಸೂಚನೆಯನ್ನು ನೀಡಿದ್ದಾರೆ. ಕನ್ನಡ ವರ್ಣಮಾಲೆಯ ಬಗ್ಗೆ ಈ ಮೂವರ ಅಭಿಪ್ರಾಯವನ್ನು ವಿವರಿಸಿ ಅವರಲ್ಲಿನ ವಿಶೇಷತೆ ಮತ್ತು ವ್ಯತ್ಯಾಸವನ್ನು ಅಲ್ಲಲ್ಲಿ ತಿಳಿಸಿದ್ದಾರೆ. ಅಲ್ಲಲ್ಲಿನ ಸೂತ್ರಗಳನ್ನು ತಿಳಿಸಿ ಅವುಗಳ ಬಗ್ಗೆ ವಿಮರ್ಶಿಸಿ ಲೇಖಕರು ತಮ್ಮ ಸ್ಪಷ್ಟ ಅಭಿಪ್ರಾಯಗಳನ್ನು ತಿಳಿಸಿದ್ದಾರೆ. "ನಾಗವರ್ಮ ಕೇಶೀರಾಜರ ಸ್ವರ ಕಲ್ಪನೆಯಲ್ಲಿ ಯಾವ ವ್ಯತ್ಯಾಸವೂ ನಮಗೆ ಕಾಣುವುದಿಲ್ಲ. ಆದರೆ ಭಟ್ಟಾಕಳಂಕನ ಸ್ವರ ಕಲ್ಪನೆ ಇವರಿಬ್ಬರಿಗಿಂತ ಭಿನ್ನವೆಂಬುದು ನಿರ್ವಿವಾದ. ನಾಗವರ್ಮ, ಕೇಶಿರಾಜರಂತೆ ಭಟ್ಟಾಕಳಂಕನೂ ಋವರ್ಣ, ಌವರ್ಣ-ಎಂಬೀ ಸ್ವರಗಳು ಅಚ್ಚಗನ್ನಡ ಶಬ್ದಗಳಲ್ಲಿ ಪ್ರಯೋಗವಾಗುವುದಿಲ್ಲವೆಂದು ಭಾವಿಸಿ ಸೂಚಿಸಿದ್ದರೂ ಅವರಂತೆ ಕನ್ನಡ ಮಾಲೆಯಿಂದ ಈ ಸ್ವರಗಳನ್ನು ವರ್ಗಿಸದೆ ಕನ್ನಡ ಭಾಷೆಯಲ್ಲಿ ಈ ಸ್ವರಯುಕ್ತ ಸಂಸ್ಕೃತ ಶಬ್ದಗಳನ್ನು ಬಳಸುವುದರಿಂದ, ಈ ಸ್ವರಗಳು ಕನ್ನಡ ವರ್ಣಮಾಲೆಗೆ ಅತ್ಯಗತ್ಯವೆಂದು ನಿಶ್ಚಯಿಸಿ ಕನ್ನಡ ವರ್ಣಮಾಲೆಯಲ್ಲಿ ಸೇರಿಸಿರುವನು" ಎಂದು ಹೇಳಿರುವ ಇವರ ತುಲನಾತ್ಮಕ ಪ್ರಜ್ಞೆಯು ಇಲ್ಲಿ ಎದ್ದು ಕಾಣುತ್ತದೆ.

ವಿಷಯವೊಂದನ್ನು ಸಮರ್ಥಿಸಿ ಸಾಧಿಸುವಲ್ಲಿ ದೊಡ್ಡಸ್ವಾಮಿಯವರು ಸತ್ಯದತ್ತ ದೃಷ್ಟಿ ಹರಿಸಿ ಯಾವುದು ದೊಡ್ಡದು ಯಾವುದುಚಿಕ್ಕದು ಎಂಬುದನ್ನು ಎಣಿಸದೆ ಇದ್ದುದನ್ನು ಇದ್ದಂತೆ ತಮಗೆ ತೋರಿದುದನ್ನು ಹೇಳುವ ಇವರ ಎದೆಗಾರಿಕೆಯು ಮೆಚ್ಚುವಂತಿದೆ. ಯ ವ ಲಕಾರಗಳ ಸಾನುನಾಸಿಕತ್ವದ ಬಗೆಗಿನ ಎಂ. ವಿ. ಸೀತಾರಾಮಯ್ಯ ಮತ್ತು ಎಚ್. ಎಸ್. ಬಿಳಿಗಿರಿ ಅವರುಗಳ ಅಭಿಪ್ರಾಯವನ್ನು ಖಂಡ ತುಂಡವಾಗಿ ಖಂಡಿಸಿ ತಮಗೆ ಸರಿ ಎನಿಸಿದುದನ್ನು ತರ್ಕಬದ್ಧವಾಗಿ ತಿಳಿಸಿದ್ದಾರೆ. ಅಚ್ಚಗನ್ನಡ ವರ್ಣಮಾಲೆಯ ಬಗ್ಗೆ ಪ್ರಾಚೀನ ಮತ್ತು ಅರ್ವಾಚೀನ ದೃಷ್ಟಿಯಲ್ಲೂ ಸಹ ಸಮೀಕರಣ ಮಾಡಿದ್ದಾರೆ. ಸಂಸ್ಕೃತ ಮತ್ತು ದ್ರಾವಿಡ ಭಾಷೆಗಳ ಬಗ್ಗೆ ಪಾಶ್ಚಾತ್ಯ ವಿದ್ವಾಂಸರಾದ ಕೋಲ್ ಬ್ರೂಕ್, ಕ್ಯಾರೆ, ವಿಲ್‌ಕಿನ್ಸ್, ಪೋಪ್ ಮೊದಲಾದವರ ಅಭಿಪ್ರಾಯಗಳನ್ನೂ ತಿಳಿಸಿದ್ದಾರೆ. ದ್ರಾವಿಡ ಭಾಷೆಗಳು ಸಂಸ್ಕೃತಕ್ಕಿಂತ ಭಿನ್ನವಾದವು ಎಂದು ಫ್ರಾನ್ಸಿಸ್ ವೈಟ್ ಎಲ್ಲೀಸ್, ಎ. ಡಿ. ಕಾಂಪ್‌ಬೆಲ್, ರೆವರೆಂಡ್ ರಾಬರ್ಟ್

ಕಾಲ್ಡ್‌ವೆಲ್, ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯ ಮೊದಲಾದವರು ಹೇಳಿರುವುದನ್ನು ವಿವರಿಸಿದ್ದಾರೆ. ಪ್ರಾಚೀನ ಸಂಸ್ಕೃತ ಲಾಕ್ಷಣಿಕರು ಸ್ವರಗಳು ಉಚ್ಚಾರಣೆಯಲ್ಲಿ ಸ್ವತಂತ್ರವಾದುದೆಂದೂ ವ್ಯಂಜನಗಳು ಸ್ವರಾವಲಂಬಿಗಳಾಗಿ ಉಚ್ಚರಿಸಲ್ಪಡಬೇಕೆಂದೂ ಪ್ರಚುರಪಡಿಸಿದ್ದ ಸಿದ್ಧಾಂತವನ್ನು ಕನ್ನಡ ಲಾಕ್ಷಣಿಕರು ಅನುಮೋದಿಸಿದ್ದಾರೆ. ಆದರೆ ಆಧುನಿಕ ಭಾಷಾವಿಜ್ಞಾನಿಗಳು ಇದನ್ನು ಅಂಗೀಕರಿಸದೆ, ಆಧುನಿಕ ಭಾಷಾ ಶಾಸ್ತ್ರದಲ್ಲಿ ವ್ಯಂಜನಗಳೂ ಸ್ವರಗಳಂತೆ ಸ್ವತಂತ್ರವಾಗಿ ಉಚ್ಚರಿಸಲ್ಪಡುತ್ತವೆ ಎಂದು ಸಿದ್ಧಾಂತಿಸಿರುವುದನ್ನು ಸಿದ್ಧೇಶ್ವರ ವರ್ಮರ ಹೇಳಿಕೆಯ ಮೂಲಕ ಲೇಖಕರು ತಿಳಿಸಿದ್ದಾರೆ. ಹ್ರಸ್ವ, ದೀರ್ಘ, ಪ್ಲುತಗಳ ಬಗ್ಗೆ ಈ ಮೂರು ಮಂದಿ ವೈಯಾಕರಣಿಗಳು ವಿವರಿಸಿರುವುದನ್ನು ತುಲನಾತ್ಮಕವಾಗಿ ತಿಳಿಸಿದ್ದಾರೆ. ಐ ಔ ಗಳ ಔಚಿತ್ಯ ಅನೌಚಿತ್ಯವನ್ನು ಕೂಡ ಉದಾಹರಣೆಗಳ ಮೂಲಕ ತಿಳಿಸಿದ್ದಾರೆ. ಐ ಔ ಅಕ್ಷರಗಳಿಗೆ ಸಂಬಂಧಿಸಿದಂತೆ ರಾ. ನರಸಿಂಹಾಚಾರ್ಯರ ಅಭಿಪ್ರಾಯವನ್ನೂ ಕೂಡ ಕೊಟ್ಟಿದ್ದಾರೆ. ಮಹಾಪ್ರಾಣಾಕ್ಷರಗಳ ಅಸ್ತಿತ್ವದ ಬಗ್ಗೆ ವೈಯಾಕರಣಿಗಳ ಮೂಲಕ ವಿಷಯಗಳನ್ನು ಮಂಡಿಸಿದ್ದಾರೆ. ಡಾ. ಕಾಲ್ಡ್‌ವೆಲ್, ಆರ್. ರಘುನಾಥರಾವ್ ಈ ವಿಚಾರವಾಗಿ ಅಭಿಪ್ರಾಯಪಟ್ಟಿರುವುದನ್ನು ಇಲ್ಲಿ ವಿವರಿಸಲಾಗಿದೆ. ಪಕಾರ, ಹಕಾರ, ಬಿಂದು ಮೊದಲಾದುವನ್ನು ಲೇಖಕರು ಪ್ರಸ್ತಾಪಿಸಿದ್ದಾರೆ. ಇಂದು ನಮಗೆ ಬೇಕಾದ ವರ್ಣಗಳು ಎಂಬ ವಿಚಾರವನ್ನು ವಿವರಿಸುವುದರ ಮೂಲಕ ಈ ಪ್ರಕರಣವನ್ನು ಮುಕ್ತಾಯ ಮಾಡಿದ್ದಾರೆ. "ಆಧುನಿಕ ವರ್ಣಮಾಲೆಯನ್ನು ಗಮನಿಸುವಾಗ ಮಹಾ ಪ್ರಾಣಾಕ್ಷರಗಳನ್ನು ಬಿಡುವಂತಿಲ್ಲದ ಕಾರಣ ಸಂಸ್ಕೃತ ಶಬ್ದಗಳನ್ನು ಕನ್ನಡ ಭಾಷೆಯ ಜಾಯಮಾನಕ್ಕೆ ಹೊಂದಿಸಿಕೊಂಡು ಬರೆಯುವುದರಿಂದ ಹಳಗನ್ನಡದಲ್ಲಿ ವಿಶಿಷ್ಟ ಸ್ಥಾನವನ್ನು ಗಳಿಸಿದ್ದಾರೆ. ಱ ಮತ್ತು ೞ ಗಳನ್ನು ಕೈ ಬಿಟ್ಟಿದ್ದೇವೆ. 'ಶ' 'ಷ' ಗಳನ್ನು ನಾವು ಇಂದು ಬಳಸುತ್ತೇವೆ. ಇವುಗಳ ಜೊತೆಗೆ ಕೆಲವು ಇಂಗ್ಲೀಷಿನ ಪದಗಳನ್ನು ಕನ್ನಡದಲ್ಲಿ ಬಳಸುವುದರಿಂದ ಕೆಲವು ಚಿಹ್ನೆ (...) ಗಳನ್ನು ಉಪಯೋಗಿಸಬೇಕಾಗುತ್ತದೆ.

ಉದಾ :—ಫ಼ಾದರ್, ಜ಼ಾ"

ಲಿಂಗದ ಬಗ್ಗೆ ಸಮೀಕ್ಷೆ ಮಾಡಿದ್ದಾರೆ. ಈ ಶಬ್ದವು ಪಾರಿಭಾಷಿಕ ಎಂಬುದನ್ನು ಪ್ರಾಚೀನ ಸಂಸ್ಕೃತ ಮತ್ತು ಕನ್ನಡ ಲಾಕ್ಷಣಿಕರು ವಿಶದೀಕರಿಸಿರುವುದನ್ನು ತಿಳಿಸಿದ್ದಾರೆ. ಕಾತಂತ್ರರೂಪಮಾಲಾ ಸಂಸ್ಕೃತ ವ್ಯಾಕರಣದ ಮೂಲಕ ಲಿಂಗ ಎಂಬ ಪಾರಿಭಾಷಿಕ ಶಬ್ದಕ್ಕೆ ವಿವರಣೆ ನೀಡಿದ್ದಾರೆ. ಶಾಕಟಾಯನ, ಪೂಜ್ಯಪಾದರು, ಪಾಣಿನಿ ಇವರ ವಿವರಣೆಯನ್ನೂ ಕೊಡ ಕೊಟ್ಟಿದ್ದಾರೆ. ಭಾಷಾಭೂಷಣ, ಶಬ್ದಸ್ಮೃತಿ ಇವುಗಳು ಲಿಂಗ ಶಬ್ದ ಸ್ವರೂಪವನ್ನು ವಿವರಿಸಿರುವುದನ್ನು ತಿಳಿಸಿ ಕೇಶಿರಾಜನ, ಭಟ್ಟಾಕಳಂಕನ ವಿವರಣೆಯನ್ನೂ ಕೂಡ ಕೊಟ್ಟಿದ್ದಾರೆ. ಎಂ. ಆರ್. ಕಾಳೆ ಮತ್ತು ಜಿ. ಎ. ಗ್ಲೀಸನ್ ಪಂಡಿತರು ಪ್ರಾತಿಪದಿಕ ಪದದ ಸೂತ್ರ ವಿವರಣೆ ಮಾಡಿರುವುದನ್ನೂ ತಿಳಿಸಿದ್ದಾರೆ. ಸಹಜ ಮತ್ತು ನಿಷ್ಪನ್ನನಾಮ ಪ್ರಕೃತಿಗಳನ್ನು ಲಿಂಗವೆಂದು ಕರೆಯಬಹುದು ಎಂದಿದ್ದಾರೆ. ನಾಗವರ್ಮ, ಕೇಶೀರಾಜ ಮತ್ತು ಭಟ್ಟಾಕಳಂಕ ಇವರುಗಳು ಲಿಂಗದ ಬಗ್ಗೆ ಸಾಧಿಸಿರುವುದನ್ನು ಚಿತ್ರಿಸಿದ್ದಾರೆ. ಭಾಷೆಯಲ್ಲಿನ ದ್ವಿವಿಧ ಲಿಂಗವಿವಕ್ಷೆಯನ್ನು ವಿಶ್ವದ ಭಾಷೆ, ಭಾರತೀಯ ಭಾಷೆ, ದ್ರಾವಿಡ ಭಾಷೆ ಇವುಗಳು ತಾಳಿರುವುದರ ಮೂಲಕ ಭಾಷಾ ವಿಜ್ಞಾನಿ ವಿಲಿಯಂ ಡ್ವೈಟ್ ವಿಟ್ನಿ ವಿದ್ವಾಂಸನು ನೀಡಿರುವ ವಿವರಣೆಯನ್ನು ಕೊಟ್ಟು ವಿವರಿಸಿದ್ದಾರೆ. ಲಾಕ್ಷಣಿಕರಲ್ಲಿ ಕಾಣುವ ಸಮಾನ ಮತ್ತು ವಿಶೇಷಾಂಶಗಳು ಆಧುನಿಕ ನಿಲುವು ಇವುಗಳನ್ನು ಇಲ್ಲಿ ವಿಶ್ಲೇಷಿಸಿದ್ದಾರೆ. ದ್ರಾವಿಡ ಭಾಷೆಗಳ ಲಿಂಗ ವಿವಕ್ಷೆಯನ್ನು ಕುರಿತು ಡಾ. ಕಾಲ್ಡ್‌ವೆಲ್ ಮತ್ತು ರಾ. ನರಸಿಂಹಾಚಾರ್ ಇವರ ಅಭಿಪ್ರಾಯವನ್ನು ಸಹ ಸೂಚಿಸಿದ್ದಾರೆ. "ತಮಿಳು ಮತ್ತು ತೆಲುಗು ಭಾಷೆಗಳಲ್ಲಿ ದ್ವಿವಿಧ ಲಿಂಗವಿವಕ್ಷೆ ಇರುವಂತೆ ಕನ್ನಡ ಭಾಷೆಯಲ್ಲಿಯೂ ಮೇಲು ಜಾತಿ ಮತ್ತು ಕೀಳು ಜಾತಿ ಎಂಬ ಲಿಂಗವಿವಕ್ಷೆಯನ್ನು ಇಟ್ಟುಕೊಳ್ಳಬಹುದೆಂದು ತಾವು ಬರೆದ 'ಕನ್ನಡ ಭಾಷೆಯ ಚರಿತ್ರೆ' ಯಲ್ಲಿ ಪೂಜ್ಯಗುರುಗಳಾದ ಪ್ರೊ. ಬಿ. ಎಂ. ಶ್ರೀಕಂಠಯ್ಯ ಮತ್ತು ಪ್ರೊ॥ ಟಿ. ಎಸ್. ವೆಂಕಣ್ಣಯ್ಯನವರು ಸೂಚಿಸಿರುತ್ತಾರೆ. ಆದರೆ ಇಂದು ನಾವು ಬಳಸುವ ಗ್ರಾಂಥಿಕ ಮತ್ತು ವ್ಯಾವಹಾರಿಕ ಭಾಷೆಯಲ್ಲಿ ಪುಲ್ಲಿಂಗ, ಸ್ತ್ರೀಲಿಂಗ ಮತ್ತು ನಪುಂಸಕ ಲಿಂಗಗಳೇ ಪ್ರಸಿದ್ಧವಾಗಿವೆ ಎಂಬುದೂ

ಗಮನಾರ್ಹ" ಎಂಬ ಸ್ವಯಂ ಸಿದ್ಧಾಂತವನ್ನು ಕೊಟ್ಟಿರುವ ಲೇಖಕರ ವ್ಯಾವಹಾರಿಕ ಅನುಭವವು ಇಲ್ಲಿ ಎದ್ದು ಕಾಣುತ್ತದೆ.

ವಚನ ವಿವರಣೆ ಇಲ್ಲಿ ಸಾಗಿದೆ. ದ್ವಿವಚನ, ತ್ರಿವಚನ, ಚತುರ್ವಿಧ ವಚನಗಳಲ್ಲಿರುವುದನ್ನು ಸೂಚಿಸಿದ್ದಾರೆ. ಸಂಸ್ಕೃತದ ಮತ್ತು ಕನ್ನಡದ ವಚನಗಳನ್ನು ಲಕ್ಷಣಗಳ ಸಹಿತ ಕನ್ನಡ ಲಾಕ್ಷಣಿಕರ ಹೇಳಿಕೆಯ ಅನುಸಾರ ಇಲ್ಲಿ ವಿವರಿಸಲಾಗಿದೆ. ವಚನ ಪಲ್ಲಟವನ್ನೂ ಹೆಸರಿಸಿದ್ದಾರೆ. ವಿಭಕ್ತಿ ಪ್ರತ್ಯಯ, ವಿಭಕ್ತಿ ಪಲ್ಲಟ ಇವುಗಳ ವಿಶ್ಲೇಷಣೆಯೂ ಕನ್ನಡ ವೈಯ್ಯಾಕರಣ ತತ್ವಕ್ಕನುಸಾರವಾಗಿ ತುಲನಾತ್ಮಕವಾಗಿ ನಡೆದಿದೆ. ರೈಸ್ ಮತ್ತು ಎಂ.ವಿ.ಸೀತಾರಾಮಯ್ಯ ಇವರ ಹೇಳಿಕೆಯನ್ನೂ ಈ ಸಮೀಕ್ಷಣೆ ಮಧ್ಯದಲ್ಲಿ ಕೊಡಲಾಗಿದೆ. ಸರ್ವನಾಮ, ಗುಣವಾಚಕ, ಸಂಖ್ಯಾವಾಚಕ, ತದ್ಧಿತಾಂತ, ಸಂಧಿ, ಸಮಾಸ, ಕ್ರಿಯಾಪದ, ಅನ್ಯ ದೇಶ್ಯ, ತದ್ಭವ, ಸಮ ಸಂಸ್ಕೃತ, ಅವ್ಯಯ–ಈ ಅಂಶಗಳ ಬಗ್ಗೆಯೂ ತುಲನಾತ್ಮಕವಾಗಿ ವಿಶ್ಲೇಷಿಸಿ ಲೇಖಕರು ತಮ್ಮ ವಿದ್ವತ್ಪ್ರಚುರ್ಯವನ್ನು ಪ್ರದರ್ಶಿಸಿದ್ದಾರೆ. "ಕಿಟ್ಟೆಲ್‌ರವರು ವೈಯ್ಯಾಕರಣ ನಿಲವನ್ನೇ ಅಲ್ಪಸ್ವಲ್ಪ ವ್ಯತ್ಯಾಸದೊಡನೆಯೇ ವಿವರಿಸಿದಂತಾಯಿತೇ ವಿನಾ ಭಾಷಾಶಾಸ್ತ್ರದ ದೃಷ್ಟಿಯಿಂದ ಪರಿಶೀಲಿಸಿದಂತಾಗಲಿಲ್ಲ." ಎಂದು ಲೇಖಕರು ಹೇಳಿರುವುದು ಅವರ ಸತ್ಯಪ್ರಿಯತೆಯ ಸಂಕೇತವಾಗಿದೆ. ಕನ್ನಡದಲ್ಲಿ ಶಬ್ದರಚನೆ ಎಂಬ ಪ್ರಬಂಧದಲ್ಲಿ ಡಿ. ಎಲ್. ನರಸಿಂಹಾಚಾರ್ಯರು ಕೆಲವು ತದ್ಧಿತ ಪ್ರತ್ಯಯಗಳ ಸ್ವರೂಪವನ್ನು ತಿಳಿಯಲು ಅವಕಾಶವಾಗಿರುವುದನ್ನು ಲೇಖಕರು ತಿಳಿಸಿದ್ದಾರೆ. ಅವಶ್ಯವಿದ್ದೆಡೆ ಪಾಣಿನಿಯನ್ನು ಲೇಖಕರು ಬಳಸಿಕೊಂಡಿದ್ದಾರೆ. 'ಪರಃ ಸನ್ನಿಕರ್ಷಃ ಸಂಹಿತಾ' ಎಂಬ ಪಾಣಿನಿ ಸೂತ್ರವನ್ನು ಸಂಧಿ ಪ್ರಕರಣದಲ್ಲಿ ಪ್ರಯೋಗಿಸಿದ್ದಾರೆ. ಸಂಧಿಯನ್ನು ಸಂಹಿತೆ ಎಂದು ಹೇಳಲು ಕರ್ನಾಟಕ ಶಬ್ದಾನುಶಾಸನ ಪ್ರಕಾಶಿಕೆಯಲ್ಲಿ ಸಂ ಎಂಬ ಉಪಸರ್ಗ ಪೂರ್ವಕವಾದ ಧಾ ಧಾತುವಿನ ಮೇಲೆ ಈ ಎಂಬ ಪ್ರತ್ಯಯವನ್ನು ಮಾಡಿದರೆ ಸಂಧಿ ಶಬ್ದವೂ, ತ ಪ್ರತ್ಯವನ್ನು ಮಾಡಿದರೆ ಸಂಹಿತಾ ಶಬ್ದವು ನಿಷ್ಪನ್ನವಾಗುವುದು– ಎಂದು ನಿರೂಪಿಸಿರುವುದನ್ನು ಇಲ್ಲಿ ಲೇಖಕರು ತಿಳಿಸಿದ್ದಾರೆ. ಅರಿಸಮಾಸವನ್ನು ವಿವರಿಸುವ ವೇಳೆ ಕವಿರಾಜಮಾರ್ಗದ ಪದ್ಯವನ್ನು ಸೂಚಿಸಿದ್ದಾರೆ.

ತಱಿಸಂದಾ ಸಕ್ಕದಮುಮ ।
ನಱಿಯದೆ ಕನ್ನಡಮುಮಂ ಸಮಾಸೋಕ್ತಿಗಳೊಳ್ ॥
ಕುಱಿತು ಬೆರಸಿಪೊಡೆ ವಿರಸಂ ।
ಮಱುಗುವ ಪಾಲ್ಗಳೆಯ ಪನಿಗಳಂ ಬೆರಸಿದವೋಲ್ ॥

ಅವ್ಯಯ ಪ್ರಸಂಗ ಪ್ರಕರಣದಲ್ಲಿ ಸಿದ್ಧಾಂತ ಕೌಮುದಿಯನ್ನು ಲೇಖಕರು ಉಪಯೋಗಿಸಿಕೊಂಡಿದ್ದಾರೆ.

ಸದೃಶಂ ತ್ರಿಷುಲಿಂಗೇಷು ಸರ್ವಾಸುಚ ವಿಭಕ್ತಿಷು ।
ವಚನೇಷು ಚ ಸರ್ವೇಷು ಯನ್ನವ್ಯೇತಿ ತದವ್ಯಯಂ ॥

ಈ ಬಗೆಯಾಗಿ ದೊಡ್ಡಸ್ವಾಮಿಯವರು ಹಳಗನ್ನಡ ವ್ಯಾಕರಣಗಳ ತುಲನಾತ್ಮಕ ವಿಶ್ಲೇಷಣೆ ಸಾಗಿಸಿ ತಮ್ಮ ವ್ಯಾಕರಣ ವಿಜ್ಞಾನದ ವೈದುಷ್ಯವನ್ನು ಈ ಮೂಲಕ ಪ್ರದರ್ಶಿಸಿದ್ದಾರೆ. ಯಾವ ಪಕ್ಷಪಾತ ದೃಷ್ಟಿಗೂ ಆಹುತಿಯಾಗದೆ ಕೃತಿಯ ಸಹಜ ತತ್ವವನ್ನು ಹೊರಗೆಡಹುವಂತೆ ಈ ವ್ಯಾಕರಣಗಳನ್ನು ಪರಿಶೀಲಿಸಿ ತೂಗಿ ಬೆಲೆ ಕಟ್ಟಿದ್ದಾರೆ. "ವಿಮರ್ಶೆ ಎನ್ನುವುದು ಕೃತಿಗಳನ್ನು ಕುರಿತ ತೀರ್ಪು ಮಾತ್ರವಾಗದೆ ಜನರ ಅಭಿರುಚಿಯನ್ನು ತಿದ್ದುವ ಸಾಧನವೂ ಆಗಬೇಕಾಗಿದೆ."[2] ಸಮ್ಯಕ್ ಸಾಹಿತಿವರ್ಯರಾದ ಶ್ರೀ ದೊಡ್ಡಸ್ವಾಮಿಯವರು ಈ ದೊಡ್ಡ ಸಾಹಸ ಕಾರ್ಯವೊಂದನ್ನು ಎಸಗಿ ಸಾರ್ಥಕಜೀವಿಗಳಾಗಿದ್ದಾರೆ.

---

2. ಜಿ. ಎಸ್. ಶಿವರುದ್ರಪ್ಪ: ವಿಮರ್ಶೆಯ ಪೂರ್ವ ಪಶ್ಚಿಮ, ಪು. 121

# ಷಟ್ಸ್ಥಲ ಸಂಗ್ರಹ

ಶ್ರೀ ಜಿ. ಎ. ಶಿವಲಿಂಗಯ್ಯ ಎಂ.ಎ.,
ಕನ್ನಡ ಉಪನ್ಯಾಸಕರು
ಮರಿಮಲ್ಲಪ್ಪ ಜ್ಯೂನಿಯರ್ ಕಾಲೇಜು
ಮೈಸೂರು.

ಕನ್ನಡ ಭಾಷಾ ಚರಿತ್ರೆಯಲ್ಲಿ ಹನ್ನೆರಡನೆಯ ಶತಮಾನವು ಸರ್ವರ ಗಮನವನ್ನು ಸೆಳೆಯುತ್ತದೆ. ಆ ಅವಧಿಯಲ್ಲಿ ಕನ್ನಡ ಭಾಷೆಗೊಂದು ಹೊಸ ಬೆಡಗು, ಹೊಸ ಸೊಗಸು ಕೂಡಿ ಬಂದವು. ಇದರ ಕರ್ತರು ವಚನಕಾರರು. ಶಿವಶರಣರು ತಮ್ಮ ವಚನಗಳ ವಿನೂತನ ರಚನೆಯ ಮೂಲಕ ಕನ್ನಡ ಭಾಷೆಯನ್ನು ಶ್ರೀಮಂತಗೊಳಿಸಿದರು. ಗಡುಚಾದ ಭಾಷೆಯಿಂದ ಸಾಹಿತ್ಯವು ಕೇವಲ ಕೆಲವೇ ಕೆಲವು ಜನರ ಸೊತ್ತಾಗಿ ಶ್ರೀಸಾಮಾನ್ಯರು ಸಾರಸ್ವತ ಜಗತ್ತಿಗೆ ಹೊರತಾಗಿದ್ದುದು ಶಿವಶರಣರಿಗೆ ಕಂಡುಬಂದಿತು. ಆ ಕೊರತೆಯನ್ನು ತಮ್ಮ ಸಾಹಿತ್ಯ ರಚನೆಯ ಮುಖಾಂತರ ಪರಿಹರಿಸಿದರು. ಸಾಹಿತ್ಯವು ಶ್ರೀಸಾಮಾನ್ಯರ ಸೊತ್ತಾಗಿ ಸೊಗಸುವಂತೆ ವಚನಕಾರರು ಮಾಡಿದರು. ಈ ವಚನಗಳು ಲೌಕಿಕ ಪ್ರಗತಿಗೆ ಮಾರ್ಗದರ್ಶಕ, ತಾರಕ. ಜನವಾಣಿಯು ದೈವವಾಣಿಯ ಗದ್ದುಗೆಯನ್ನೇರುವಂತೆ ವಚನಕಾರರು ಶ್ರಮಿಸಿದರು. ಆಡುಮಾತಿನ ರಸಗಟ್ಟಿಯೇ ವಚನ ಸಾಹಿತ್ಯ ಎನ್ನುವಂತಾಯಿತು. ಇಲ್ಲಿನ ವೀರಶೈವ ಪಾರಿಭಾಷಿಕ ಸಂಪತ್ತು ಅತ್ಯಂತ ಶ್ರೀಮಂತವಾದುದು. ಶರಣರು ಬಳಸಿದ ಭಾಷೆಯು ಭಕ್ತಿ ಜ್ಞಾನ ವೈರಾಗ್ಯಗಳನ್ನು ದೊರಕಿಸುತ್ತದೆ. ಸ್ವಾನುಭವ, ಲೋಕಾನುಭವ ಹಾಗೂ ಶಿವಾನುಭವ ಇವುಗಳ ತ್ರಿವೇಣೀ ಸಂಗಮವೇ ವಚನಗಳು. ಕಿರಿದರಲ್ಲಿ ಹಿರಿದಾದ ಅರ್ಥವಿರುವುದನ್ನು ಇಲ್ಲಿ ಕಾಣುತ್ತೇವೆ. ವಚನಗಳಲ್ಲಿ ಕಂಡುಬರುವ ಬೆಡಗಿನ ಮಾತುಗಳು ಅಪೂರ್ವತರವಾಗಿವೆ. ಶರಣರ ಪವಿತ್ರ ಬದುಕಿನ ಅಭಿವ್ಯಕ್ತಿಯೆನ್ನುವ ವಚನಗಳು ಅವರ ಅವಿರಳ ಸಾಧನೆ—ಸಿದ್ಧಿಗಳ ದ್ಯೋತಕವಾಗಿವೆ.

ಜೇಡರ ದಾಸಿಮಯ್ಯ, ಅಲ್ಲಮಪ್ರಭು, ಬಸವೇಶ್ವರ, ಚನ್ನಬಸವಣ್ಣ, ಸಿದ್ಧರಾಮೇಶ್ವರ, ಮಡಿವಾಳ ಮಾಚಿದೇವ, ಅಜಗಣ್ಣ, ಅಂಬಿಗರ ಚೌಡಯ್ಯ, ಆದಯ್ಯ, ಕೋಲ ಶಾಂತಯ್ಯ, ಏಕಾಂತದ ರಾಮಿತಂದೆ, ಗಜೇಶ ಮಸಣಯ್ಯ, ಅಕ್ಕಮಹಾದೇವಿ, ನೀಲಾಂಬಿಕೆ, ಮುಕ್ತಾಯಿ, ದುಗ್ಗಳೆ, ಮಹಾದೇವಿ ಮೊದಲಾದ ಶರಣ ಶರಣೆಯರು ಅಸಂಖ್ಯಾತ ವಚನಗಳ ಭಂಡಾರವನ್ನೇ ಬಿಟ್ಟು ಹೋಗಿದ್ದಾರೆ.

"ವೀರಶೈವ ಧರ್ಮಕ್ಕೆ ವಿಶಿಷ್ಟವಾದ ಶಕ್ತಿ ವಿಶಿಷ್ಟಾದ್ವೈತ, ಷಟ್‌ಸ್ಥಲ, ಲಿಂಗ ಅಂಗ ಸಂಬಂಧ, ಲಿಂಗಧಾರಣಾದಿ ವೀರಶೈವಾಚಾರ, ಅಷ್ಟಾವರಣ, ಪಂಚಾಚಾರ ಇವುಗಳನ್ನು ವಚನಗಳು ವಿವರವಾಗಿ ವಿವೇಚಿಸುವವು."[1] "ವೀರಶೈವರ ಜೀವನಕ್ಕೆ ಸಂಬಂಧಿಸಿದ ಸಮಸ್ತ ವಿಷಯಗಳೂ ವಚನಗಳಲ್ಲಿ ಅಡಕವಾದವು. ಅಪರ ಗೃಹ್ಯ ಸೂತ್ರಗಳು, ಧರ್ಮ ಸೂತ್ರಗಳು, ವೇದಾಂತ ಸೂತ್ರಗಳು, ಆಚಾರ ವ್ಯವಹಾರಗಳು, ಮತತತ್ವಗಳು ಎಲ್ಲವೂ ಸೇರಿ ವಚನ ಸಾಹಿತ್ಯ ವೀರಶೈವಧರ್ಮ ಸಾಹಿತ್ಯವಾಗಿದೆ. ಪ್ರೇಮದ ಪ್ರಭಾವದಿಂದ ಅನಸೂಯೆಗಾಗಿ[2] ಸದ್ಭಾವಗೊಂಡ ಸುಜ್ಞಾನವ ಪಡೆದು ಅದರಿಂದ ಸ್ವಾನುಭಾವ ಸಂಪಾದನೆಗೊಳಿಸಿದ ಮೇಲ್ಮೆಯು ವಚನ ಸಾಹಿತ್ಯಕ್ಕಿದೆ. ಈ ಸ್ವಾನುಭಾವ ಸಂಪಾದನೆಯನ್ನೆ ಗುರು ಲಿಂಗ ಜಂಗಮ ಮೂರರಲ್ಲಿ ದೃಷ್ಟಗೊಳಿಸಿದ ಘನತೆಯು ವಚನ ಸಾಹಿತ್ಯಕ್ಕಿದೆ."[3]

"ವಚನ ಸಾಹಿತ್ಯದಲ್ಲಿ ಮುಖ್ಯವಾಗಿ ವಿಶ್ವ ಧರ್ಮದ ಮಾತುಗಳು ಬಂದಿದ್ದರೂ ವೀರಶೈವ ಮತದ ಪ್ರಕ್ರಿಯೆಗಳಾದ ಅಷ್ಟಾವರಣ, ಪಂಚಾಚಾರ, ಮತ್ತು ಷಟ್ಸ್ಥಲಗಳ ವಿಷಯವಾಗಿ ಬಹಳ ಸಂಗತಿಗಳು ನಿರೂಪಿತವಾಗಿವೆ. ಲಿಂಗಧಾರಣ ಮತ್ತು ಶಿವದೀಕ್ಷೆಗಳ ವಿಷಯಗಳೂ ವಚನಗಳಲ್ಲಿ ಇವೆ."[4]

---

1. ರಂ. ರಾ. ದಿವಾಕರ : ವಚನಶಾಸ್ತ್ರ ರಹಸ್ಯ, ಭಾಗ ii ಪುಟ ೨೫೭ (1945)
2. ಎಂ. ಆರ್. ಶ್ರೀನಿವಾಸಮೂರ್ತಿ : ವಚನ ಧರ್ಮಸಾರ, ಪುಟ 12 (1946)
3. ವೀ. ರು. ಕೊಪ್ಪಳ : ವೀರಶೈವ ದರ್ಶನ, ಪುಟ ೧೭.
4. ಬಿ. ಶಿವಮೂರ್ತಿಶಾಸ್ತ್ರಿ: ವೀರಶೈವ ಸಾಹಿತ್ಯ ಮತ್ತು ಇತಿಹಾಸ, ಪುಟ ೬೪, ೬೫ (1953)

"ವಚನಕಾರರು ತಮ್ಮ ಪರಿಪೂರ್ಣತೆಯ ಸಾಧನಾ ವಿಧಾನವನ್ನು "ಲಿಂಗಾಂಗ ಸಾಮರಸ್ಯ" ಎಂಬ ಮಾತಿನಲ್ಲಿ ಹೇಳಿದ್ದಾರೆ. ಜೀವ ಶಿವತತ್ವದೊಡನೆ ಅನು ಸಂಧಾನ ಮಾಡಿಕೊಳ್ಳುವುದೇ ಬಾಳಿನ ಉದ್ದೇಶ."[5] ಈ ಪರಿಯಲ್ಲಿ ವಚನ ಸಾಹಿತ್ಯ ಮತ್ತು ವಚನಕಾರರ ಹಿರಿಮೆ ಗರಿಮೆ ಇದೆ.

ವಚನಗಳನ್ನು ರಚಿಸಿದವರಂತೆಯೇ ತಮ್ಮ ಹಿಂದಿನವರ ವಚನಗಳನ್ನು ಸಂಗ್ರಹಿಸಿ ಸಂಕಲಿಸಿ ಸಂಪಾದಿಸಿದವರು ಮತ್ತೊಂದು ಗುಂಪು. ತಮ್ಮ ಆರ್ಷೇಯ ಆಸ್ತಿ ಇದು ಎಂದು ತಿಳಿದು ಜನ ಬದುಕಲೆಂದು ಜನೋಪಯೋಗಿಯಾಗಿ ಇದು ಸಾರ್ಥಕವಾಗಲೆಂದು ಈ ಸಂಪಾದನಾ ಕಾರ್ಯ ಸಾಗತೊಡಗಿತ್ತು. ಒಂದು ವಿಧದಲ್ಲಿ ಪರೋಕ್ಷವಾಗಿ ಈ ಕಾರ್ಯವು ಧರ್ಮ ಜಾಗೃತಿಯ, ಧರ್ಮ ಪ್ರಸಾರದ ಸಾಧನವಾಗತೊಡಗಿತು. ಈ ಬಗೆಯವರಲ್ಲಿ ಒಬ್ಬರು ಶಾಂತದೇವರು. ಇವರ ಕೃತಿಯು ಷಟ್ಪ್ರಕಾರ ಸಂಗ್ರಹ. ಬಸವಾದಿ ಪ್ರಮಥರ ವಚನಗಳನ್ನು ಸಂಗ್ರಹಿಸಿ ಸೇರಿಸಿದ ವಚನಸಂಕಲನ ಕೃತಿಯು ಷಟ್ಪ್ರಕಾರ ಸಂಗ್ರಹವು. ಶಿವ ಶರಣರ ತಾತ್ವಿಕ ನೆಲೆಗಟ್ಟಿಗೆ ಆದಷ್ಟೂ ಸಮೀಪ ಸಮೀಪ ಬರುವ ಸಂಸ್ಕೃತ ಶ್ಲೋಕಗಳನ್ನೂ ವೇದಾಗಮ ಪುರಾಣಾದಿ ಪ್ರಾಚೀನ ಗ್ರಂಥಗಳಿಂದ ಆರಿಸಿ ಕೊಂಡು ಅವುಗಳಿಗೆ ಪ್ರತಿಪದ ಟೀಕೆಯನ್ನು ಬರೆದು ಆಯಾಯಾ ಸ್ಥಲಗಳಿಗೆ ಪೂರ್ವಭಾಗವಾಗಿ ಸೇರಿಸಿ ಆನಂತರ ಅನುಭಾವಿಗಳು ಅರಿಯಲೆಂದು ಇವರು ಈ ಸಂಕಲನವನ್ನು ಸಿದ್ಧಪಡಿಸಿದ್ದಾರೆ. ಕ್ರಿ. ಶ. ೧೪೭೫ರ ಗುಬ್ಬಿ ಮಲ್ಲಣ್ಣನ ಗಣ ಭಾಷ್ಯ ರತ್ನಮಾಲೆಯನ್ನು ಇವರು ಅನುಸರಿಸಿರುವಂತೆ ಕಂಡುಬರುತ್ತದೆ. ಇವರ ಗುರುಗಳು ಶಾಂತ ವೃಷಭರು. ಶಾಂತ ವೃಷಭರ ಕಾಲವು ೧೭ ನೇ ಶತ ಮಾನವೆಂದು ಕವಿಚರಿತೆಕಾರರು ಅಭಿಪ್ರಾಯ ಪಟ್ಟಿದ್ದಾರೆ. ಆದಕಾರಣ ಇವರ ಕಾಲ ಹದಿನೇಳನೇ ಶತಮಾನ.

ತೃತೀಯ ಶಿರೋನಾಮೆಯು ಇದರ ಸ್ವರೂಪವನ್ನು ತಿಳಿಸುತ್ತದೆ. ಅದುವೇ ಷಟ್‌ಪ್ರಕಾರ. ಅದರಲ್ಲಿಯೂ ಎರಡು ಭಾಗವಾಗಿವೆ. ಒಂದು ಸಂಬಂಧ, ಮತ್ತೊಂದು ಆಚರಣೆ. ಈ ಪ್ರತಿಯೊಂದು ವಿಭಾಗದಲ್ಲಿಯೂ ಮೂರು

---

5. ಜಿ. ಎಸ್. ಶಿವರುದ್ರಪ್ಪ : ಪರಿಶೀಲನ, ಪುಟ ೩೨

ಮೂರು ಪ್ರಕಾರಗಳು ಬರುತ್ತವೆ. ಮತ್ತೆ ಒಂದೊಂದು ಪ್ರಕಾರದಲ್ಲಿಯೂ ಅವಾಂತರ ಸ್ಥಲಗಳು ಬರುತ್ತವೆ. ವೀರಶೈವ ಸಿದ್ಧಾಂತಕ್ಕನುಸಾರವಾಗಿ ರಚಿಸಲ್ಪಟ್ಟ ಈ ಕೃತಿಯಲ್ಲಿ ಒಟ್ಟು ಅರುವತ್ತು ಸ್ಥಲಗಳಿವೆ. ಈ ಒಂದೊಂದು ಸ್ಥಲದಲ್ಲಿಯೂ ಒಂದು ಭಾಗದಲ್ಲಿ ಸಂಸ್ಕೃತ ಗ್ರಂಥಗಳಿಂದ ಆರಿಸಲ್ಪಟ್ಟ ಶ್ಲೋಕ ಗಳು, ಅವುಗಳ ಟೀಕು ಇದೆ. ಮುಂದಿನ ಭಾಗವು ಅನೇಕ ಶರಣರ ಅನೇಕ ವಚನಗಳನ್ನು ಸ್ಥಲಾನುಸಾರವಾಗಿ ಸೇರಿಸಿದೆ. ಇದರಲ್ಲಿ ಶಾಂತ ದೇವರು ಎಂಬತ್ತೊಂಬತ್ತು ಸಂಸ್ಕೃತ ಕೃತಿಗಳನ್ನು ಆರಿಸಿಕೊಂಡು ಅವುಗಳಲ್ಲಿನ ಶ್ಲೋಕ ಗಳನ್ನು ಸಿದ್ಧಾಂತಕ್ಕೆ ಸರಿಹೊಂದುವಂತೆ-ಉದಾಹರಿಸಿ ಪ್ರತಿಪದಕ್ಕೆ ಟೀಕೆಯನ್ನು ಬರೆದಿದ್ದಾರೆ. ಪ್ರಸಿದ್ಧವಾದ ಆಗಮಗಳು ೨೮, ಉಪಾಗಮಗಳೂ ಸೇರಿ ದಂತೆ ಒಟ್ಟು ೨೩೧ ಆಗಮಗಳಿವೆ. ಇವುಗಳಲ್ಲಿ ವೀರಾಗಮವು ಹದಿನೈದನೆಯದು. ಇದು ಮುಖ್ಯವಾದುದು. ಇದಕ್ಕೆ ೧೩ ಉಪಾಗಮಗಳಿವೆ. ಈ ಉಪಾಗಮಗಳ ಜೊತೆಗೆ ಮತ್ತೊಂದು ಉಪಾಗಮವೂ ಇವರ ಸಂಗ್ರಹದಿಂದ ಕಂಡುಬರುತ್ತದೆ. ಇದುವೇ ಮಿಶ್ರವೀರಾಗಮ. ಉಪಲಬ್ಧವಾಗಿಲ್ಲದ ಕೃತಿಯೊಂದನ್ನು ಕೊಟ್ಟ ಇವರ ವಿದ್ವತ್ ಪ್ರಾಚುರ್ಯ, ಸಂಶೋಧನಾ ಸಮೀಕ್ಷೆ ಇದರಿಂದ ಗೊತ್ತಾ ಗುತ್ತದೆ. ಇದೇ ಬಗೆಯಲ್ಲಿ ಪಿರಿ ಪುರಾಣ ಎಂಬ ಸಂಸ್ಕೃತದ ಹೊಸ ಕೃತಿಯನ್ನು ತಿಳಿಸಿ ಅದರ ಶ್ಲೋಕವೊಂದನ್ನು ಉದಾಹರಿಸಿದ್ದಾರೆ. ಇವರಿಂದಾಗಿ ಇದೊಂದು ಅಭ್ಯಾಸ ಪರಿಪೂರ್ಣ ಕೃತಿ ಎಂಬುದು ಎದ್ದು ಕಾಣಬರುತ್ತದೆ. ಹೊಸವಚನ ಸಂಕಲನವೊಂದು ಬೆಳಕಿಗೆ ಬಂದಿತೆಂದರೆ ಹಿಂದಿನ ವಚನಗಳ ಸಂದೇಹ ಪಾಠಗಳು ಪರಿಶುದ್ಧವಾಗಲು ಸಾಧ್ಯವಾಗುತ್ತವೆ. ಈ ದೃಷ್ಟಿಯಿಂದಲೂ ಇದೊಂದು ಗಮನಾರ್ಹ ಕೃತಿಯು.

ಸ್ತೋತ್ರ ಸ್ಥಲದ ನಂತರ ಘನ ಸಂಬಂಧ ಮೊದಲಾದ ಆರು ಪ್ರಕರಣ ಗಳಿವೆ. ಮೊದಲನೆಯದರಲ್ಲಿ ಹನ್ನೆರಡು, ನಾಲ್ಕನೆಯದರಲ್ಲಿ ಒಂಬತ್ತು, ಐದನೆಯದರಲ್ಲಿ ಹದಿಮೂರು,ಆರನೆಯದರಲ್ಲಿ ಹನ್ನೊಂದು ಉಪಪ್ರಕರಣಗಳಿವೆ. ಇವರಲ್ಲಿನ ಪ್ರತಿಯೊಂದು ವೀರಶೈವ ಪ್ರಕ್ರಿಯೆಯನ್ನೇ ಆಧರಿಸಿವೆ. ಗುರು ಶಿಷ್ಯ, ಮಾಯಾ ವಿಡಂಬನ, ಗುರುಕರುಣೆ, ಸಂಸಾರ ಹೇಯ, ಶರಣ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಐಕ್ಯ, ಘನವಸ್ತು ಸಹಜವಸ್ತು, ಸಂಸಾರ ನಿರ್ಣಯ,

ಲಿಂಗಾರ್ಪಿತ, ಪಾದೋದಕ, ಮಹಾಲಿಂಗ, ಲಿಂಗಾಂಗ, ವೀರಮಾಹೇಶ್ವರ, ಶಿವಾತ್ಮ ಪರಮತಾಂತರ ನಿರಸನ, ಶಿವಭಕ್ತಿ ಈ ಮೊದಲಾದ ಸ್ಥಲಗಳ ವಿಚಾರ ವಿವರಣೆಯು ಇಲ್ಲಿ ಬಂದಿದೆ. ಜಿಜ್ಞಾಸುಗಳಿಗೆ, ವಚನಾಭ್ಯಾಸಿಗಳಿಗೆ, ಸಂಶೋಧಕರಿಗೆ ಇದೊಂದು ಒಳ್ಳೆಯ ರಸಗವಳ. ವಚನಗಳ ಮೇಲೆ ಬಿದ್ದಿರುವ ಸಂಸ್ಕೃತ ಪ್ರಭಾವವು ಇಲ್ಲಿ ಎದ್ದು ಕಾಣುತ್ತದೆ.

ಇಲ್ಲಿನ ಶ್ಲೋಕವೊಂದರಿಂದ ಇವರ ಗುರುಭಕ್ತಿಯು ವ್ಯಕ್ತವಾಗುತ್ತದೆ.

ಸ್ಥಾವರಂ ಜಂಗಮಾಧಾರಂ ನಿರ್ಮಲಂ ಸ್ಥಿರ ಮೇವಚ ।
ಜಗದ್ವಂದಿತ ಪಾದಾಯ ತಸ್ಮೈ ಶ್ರೀ ಗುರುವೇ ನಮಃ ॥

ತಾನು ಉಪ್ದೇಶಿಸಿದ ಆರು ಪ್ರಕಾರಗಳನ್ನು ಲಿಂಗಾಚಾರ, ಶಿವಾಚಾರ, ನಿಜಾಚಾರ, ನಿಜಲಿಂಗ, ಘನಲಿಂಗ, ಸಹಜಲಿಂಗ—ಇಂತು ವಿವರಿಸುತ್ತಾನೆ.

ಲಿಂಗಾಚಾರಂ ಶಿವಾಚಾರಂ ನಿಜಾಚಾರಂ ನಿಜಲಿಂಗವಾತ್ ।
ಘನ ಸಂಗ ಸಹಜವಾನ್ ಷಡ್ಭೇದೇನಿ ಬುಧ್ಯೈರ್ವಿದಂ ॥

ಜಾತಿಭೇದವನ್ನು ಶಿವಶರಣರು ಎಂತು ಟೀಕಿಸಿದ್ದಾರೆ ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ.

"ಜಾತಿ ಭೇದಂಗಳ ಹಳಿವುದಯ್ಯಾ
ಸಾಕ್ಷಾತ್ ಹಿಂದು ಮುಂದ ಹಳಿವುದಯ್ಯಾ
ಪ್ರೀತಿಯಿಂದಾ ಬೆಳಗು ಮತವಪ್ಪುದಯ್ಯಾ
ಅಂತಾದ ದಾತನೆ ಗೊಹೇಶ್ವರನೆಂದು ಕಾಂಬುದಯ್ಯಾ."

ಗುರುಸೇವೆಯ ಹಿರಿಮೆಯನ್ನು ತಿಳಿಸುವ ವಚನವಿದು.

"ಗುರು ಚರಣದ ಸೇವೆ ಭವದ ಬಳ್ಳಿಯ ಹಳಿವುದು,
ಘನ ಘನ ಪದವ ತೋಱುವುದು ನೋಡಾ,
ಉದ್ದೈಸಿದುದೇ ನಿರಾಕಾಶ,
ನಿರಹರಣ ಕಲ್ಲೇಶ್ವರ ದೇವನಲ್ಲ."

ಲೌಕಿಕ ಜಂಜಡದಲ್ಲಿ ಜೀವಿಸುತ್ತಿರುವ ಜೀವಿಗಳಿಗೆ ಎಚ್ಚರಿಕೆ:

"ಸಾವು ತಡವಿಲ್ಲ, ನರಕ ದೂರವಿಲ್ಲ,
ಲೋಪದಿಚ್ಚೆಗೆ ಹರಿದು ಕೆಮ್ಮನೆ ಕೆಡಬೇಡ
ದುರ್ವಿಷಯವ ಬಿಡು, ಬೇಗ ಗುರು ಪಾದವ ನಂಬು,
ನಮ್ಮ ಸಿಮ್ಮಲಿಗೆಯ ಚೆನ್ನರಾಮನಲಿ ಸುಖಿಯಪ್ಪೆ ಮರುಳೆ."

ಗುರು-ಶಿಷ್ಯರ ಲಕ್ಷಣದ ವಿವರಣೆ ಇದು.

"ಹೊಲಬನಱಿಯದ ಗುರು,
ಸುಲಭನಲ್ಲದ ಶಿಷ್ಯ,
ಕೆಲಬಲನ ನೋಡಿ ಮಾಚದುಪದೇಶ,
ಅಂಧಕ ವನವ ಹೊಕ್ಕಂತೆ ಕಾಣಾ ರಾಮನಾಥ."

ಪರಮಾತ್ಮನ ಪ್ರಸಾದವನ್ನೇ ನೆರೆನಂಬಿದವನ ಭಾಷೆಯನ್ನು ಇಂತು ವಿವರಿಸುತ್ತಾರೆ.

"ಲಂಚ ಸಂಚ ವಂಚನೆಗೆ ಕೈಯಾನದ ಭಾಷೆ,
ಬಟ್ಟೆಯಲ್ಲಿ ಹೊನ್ನು ವಸ್ತ್ರ ಬಿದ್ದಿದ್ದಡೆ
ಕೈಮುಟ್ಟಿ ಎತ್ತಿದೆನಾದೊಡೆ ಅಯ್ಯಾ ನಿಮ್ಮಾಣೆ.
ನೀವಿಕ್ಕಿದ ಭಿಕ್ಷದಲ್ಲಿಪ್ಪೆನಯ್ಯಾ ಶಂಭು ಜಕ್ಕೇಶ್ವರಾ."

ಶೀಲದ ಲಕ್ಷಣವನ್ನು ಇಂತು ವಿವರಿಸಲಾಗಿದೆ.

"ಅಗ್ಘವಣಿ ಪುಷ್ಪ ಮೀಸಲಾಗಿರಬೇಕೆಂಬುದು ಶೀಲವೆ ?
ಪಂಚೇಂದ್ರಿಯ, ಷಡುವರ್ಗ, ಸಪ್ತಧಾತು ಅಷ್ಟಮದಂಗಳ ತಡೆಯಬಲ್ಲಡೆ
ಅದೇ ಕೂಡಲ ಸಂಗಯ್ಯನಲ್ಲಿ ಶೀಲವು."

ಘನಲಿಂಗದ ಬೆಳಗಿನ ವರ್ಣನೆ ಇದು.

"ಕಲ್ಲಿನೊಳಗಣ ಜ್ಯೋತಿ, ಉರಿಯೊಳಗಣ ಉಷ್ಣ,
ಹಣ್ಣಿನೊಳಗಣ ಸಾರದ ಸವಿಯಂತೆ,
ಸವಿಲೇಪನವಾದ ಮನದ ವಿಲಾಸದಂತೆ,
ನಿಜಲಿಂಗದಲ್ಲಿ ಘನ ಬೆಳಗು ತೋಱುತ್ತಲಿದೆ,
ಸದಾಶಿವಮೂರ್ತಿ ಲಿಂಗದಲ್ಲಿ."

ಸಂಸಾರ ಸುಖದ ಬಗ್ಗೆ ಇಂತು ನುಡಿದಿದ್ದಾರೆ.

"ಅನಂತಕಾಲ ನಿತ್ಯ ನಂಬಿರಿ.
ಸಂಸಾರ ಸಾರವಿದು ಹುಸಿ ಕಂಡೆಲವೋ,
ಇಂದಿನ ಸುಖ, ಇಂದಿನ ಪರಿಣಾಮ
ದಿನದಿನದ ಸುಖವು ಹುಸಿ ಕಂಡೆಲವೋ.
ಘನ ಘನ ಎಂಬ ರೂಪಿಂಗೆ ಕೇಡಿಲ್ಲವಯ್ಯಾ,
ಮಹಾಲಿಂಗ ಗಜೇಶ್ವರನಲ್ಲಿ ತಿಳಿದು ನೋಡಾ ಎಲವೋ."

ಷಡಕ್ಷರ ಮಂತ್ರದ ಮಹತಿಯ ವರ್ಣನೆ.

"ಓಂ ನಮಃ ಶಿವಾಯ, ಓಂ ನಮಃ ಶಿವಾಯ ಎಂಬುದೇ ಛಂದಸ್ಸು.
ಓಂ ನಮಃ ಶಿವಾಯ, ಓಂ ನಮಃ ಶಿವಾಯ ಎಂಬುದೇ ಋಷಿತ್ವ,
ಓಂ ನಮಃ ಶಿವಾಯ, ಓಂ ನಮಃ ಶಿವಾಯ ಎಂಬುದೇ ದೇವತ್ವ,
ಓಂ ನಮಃ ಶಿವಾಯ, ಓಂ ನಮಃ ಶಿವಾಯ, ಎನಲು ಸದ್ಯೋನ್ಮುಕ್ತಿ,
ಉರಿಲಿಂಗ ಪೆದ್ದಿ ಪ್ರಿಯ ವಿಶ್ವೇಶ್ವರಾ."

ವಚನ ಸಾಹಿತ್ಯದ ಗುರಿಯು ನೀತಿ ಬೋಧೆಯೂ ಆಗಿರುತ್ತದೆ ಎಂಬುದು ಇಲ್ಲಿ ವ್ಯಕ್ತವಾಗುತ್ತದೆ.

“ಪರಸತಿ ಯೆನಗೆ ತಾಯಿ ಸಮಾನವಯ್ಯ,
ಕನ್ಯಾಸ್ತ್ರೀ ಯೆನಗೆ ಸೋದರದ ಸಮಾನವಯ್ಯ,
ವಿಧವೆ ಯೆನಗೆ ಅಮೇಧ್ಯದ ಸಮಾನವಯ್ಯ,
ಪಣ್ಯಾಂಗನೆಯ ಸಂಗವೆನಗೆ ಕುನ್ನಿಯ ಸಮಾನವಯ್ಯ,
ದಾಸಿಯ ಸಂಗವೆನಗೆ ಸೂಕರನ ಮಾಂಸದ ಸಮಾನವಯ್ಯ.
ಇಂತಿವಕೆ ಹೇಸದೆ ಆಸೆ ಮಾಡಿ ತನು ಲೋಭದಿಂದ ಕೂಡಿದಡೆ,
ತನುವ ದಿಗ್ಬಲಿ ಕೊಡುವೆ.
ಮನ ಲೋಭದಿಂದ ನಡೆದಡೆ,
ಇನ ಸಸಿಗಳುಳ್ಳನ್ನಕ್ಕರ ನರಕದಲ್ಲಿಕ್ಕದಿರ್ದೆಯಾದಡೆ
ನಿನಗೆ ಎನ್ನಾಣೆಯಯ್ಯಾ, ಸಕಳೇಶ್ವರಾ.”

ಅರಿವು ಆಚಾರವನ್ನು ಕುರಿತು ಇಂತು ವಿವರಣೆ.

“ಭಕ್ತಂಗೆ ಬಯಕೆಯುಂಟೆ ?
ನಿತ್ಯಂಗೆ ಸಾವುಂಟೆ ?
ಸದ್ಭಕ್ತಂಗೆ ತಥ್ಯಮಿಥ್ಯವುಂಟೆ ?
ಕರ್ತೃ ಭೃತ್ಯರಾದ ಠಾವಿನಲ್ಲಿ ಪ್ರತ್ಯುತ್ತರಗೈದಡೆ
ಸತ್ಯ ಸದಾಚಾರಕ್ಕೆ ಸಲ್ಲದು.
ಆಚಾರವೇ ಪ್ರಾಣವಾದ ರಾಮೇಶ್ವರಲಿಂಗಕ್ಕೆ ಹೊರಗು.”

ಲಿಂಗೈಕ್ಯದ ಲಕ್ಷಣವನ್ನು ಇಂತು ವಿವರಿಸಿದ್ದಾರೆ.

"ಐಕ್ಯನೆಂಬಾತ ಅನ್ಯವನಱಿಯ ತನ್ನುವನಱಿಯ,
ಸಕಲವನಱಿಯ ನಿಷ್ಕಲವನಱಿಯ,
ಸರ್ವಸ್ವವೂ ಲಿಂಗವಾದಾತನಾಗಿ,
ತನ್ನ ಮೀಱಿದ ಪರತತ್ವ ಒಂದೂ ಇಲ್ಲವಾಗಿ,
ಎಲ್ಲ ತತ್ವಂಗಳಿಗೂ ಸ್ಥಾನವಾದಾತನು
ಲಿಂಗವನವಗ್ರಹಿಸಿಕೊಂಡಿಪ್ಪ,
ಪರಮ ಸೀಮೆ ತಾನಾಗಿ,
ಕಪಿಲ ಸಿದ್ಧಮಲ್ಲಿಕಾರ್ಜುನನ ಕೂಡಿದ ಕಳೆಗಳ
ಲಿಂಗಕಳೆಗಳ ಮಾಡಿದ ಲಿಂಗೈಕ್ಯನು."

ಲಿಂಗ ಭೋಗ ಸುಖದ ವರ್ಣನೆ ಇದು.

ಸೆಜ್ಜೆ ಉಪ್ಪರಿಸಿ, ಶಿವಲಿಂಗ ಕರಸ್ಥಲಕೆ ಬರೆ,
ಪ್ರಜ್ವಲಿಸಿ ತೊಳತೊಳಗಿ ಬೆಳಗಿ ಹೊಳೆವ ಕಾಂತಿಯಲ್ಲಿ ಬೆರಗಾಗಿ,
ತನು ಮನ ದೃಷ್ಟಿ ನೆಟ್ಟು ಲಿಂಗದಲ್ಲಿ ಬಜ್ಜರಿಸುವ ಸುಖ ದೊಳೋಲಾಡುತ್ತ,
ಸಜ್ಜನ ಸದ್ಭಕ್ತಿ ರತಿಯೊಡನೆ ಕೂಡಿ ಆಡೆ ಲಜ್ಜೆಗೆಟ್ಟು
ನಿಮ್ಮ ನೆರೆದೆ ಚನ್ನಮಲ್ಲಿಕಾರ್ಜುನಾ."

ಈ ಪರಿಯಲ್ಲಿ ವೀರಶೈವ ತತ್ವಗಳನ್ನು ಶಾಸ್ತ್ರಾಧಾರಿತವಾಗಿ ಕೊಟ್ಟು ವಾಚಕರ ಮನಂಬುಗುವಂತೆ ವಚನ ಸಂಕಲನ ಮಾಡಿದ ಶಾಂತದೇವರು ವೀರಶೈವ ಜಗತ್ತಿನಲ್ಲಿ ತಮ್ಮದೇ ಆದ ಸ್ಥಾನವನ್ನು ಗಳಿಸಿದ್ದಾರೆ.

ಷಟ್ಸ್ಥಲ ಸಂಗ್ರಹ ಕೃತಿಯ ಸಂಪಾದಕರಾದ ಶ್ರೀ ಜಿ. ಎ. ಶಿವಲಿಂಗಯ್ಯ ನವರಿಗೆ ಪ್ರೌಢಶಾಲಾ ವಿದ್ಯಾರ್ಥಿಜೀವನದ ವೇಳೆಯಿಂದಲೂ ಓಲೆಗರಿಯನ್ನು ಸಂಪಾದಿಸುವುದೊಂದು ಹವ್ಯಾಸವಾಗಿಬಿಟ್ಟಿದೆ. ಈ ಹವ್ಯಾಸವು ಇಂದು

ಫಲಕಾರಿಯಾಗಿದೆ. ಪಾಂಡವಪುರ ಸಕ್ಕರೆ ಕಾರ್ಖಾನೆಯಲ್ಲಿ ಕೆಲಸಕ್ಕೆ ಸೇರಿ ಹಗಲು ವೇಳೆ ಕಾಲೇಜಿಗೆ ವ್ಯಾಸಂಗ ಮಾಡಿ ಬಿ.ಎ., ಎಂ.ಎ., ಪದವಿಯನ್ನು ಪಡೆದು ಇಂದು ಮೈಸೂರಿನ ಮರಿಮಲ್ಲಪ್ಪನವರ ಜೂನಿಯರ್ ಕಾಲೇಜಿನಲ್ಲಿ ಕನ್ನಡ ಉಪನ್ಯಾಸಕರಾಗಿದ್ದಾರೆ. ಜೀವನ, ಬಸವ ಪಥ ಮೊದಲಾದ ಪತ್ರಿಕೆಗಳಲ್ಲಿ ಇವರ ಬರಹಗಳು ಬೆಳಕಿಗೆ ಬಂದಿವೆ. ಶಿಖಾರತ್ನ, ಮುತ್ತಿನಕಂಥೆ, ವಚನೈಕೋತ್ತರ ಶತಸ್ಥಲ ಮೊದಲಾದ ಪುಸ್ತಕಗಳು ಇವರವು. ಗದಗಿನ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠದವರು ಜಿ. ಎ. ಶಿವಲಿಂಗಯ್ಯನವರ ಪಟ್ಟ್ರಕಾರ ಸಂಗ್ರಹ ಕೃತಿಯನ್ನು ಬೆಳಕಿಗೆ ತಂದು ಸಹಜ ಸಾಹಿತಿಗೆ ಪ್ರೋತ್ಸಾಹ ಕೊಟ್ಟಿರುವುದು ಉಲ್ಲೇಖಿಕವಾದಂತೆಯೇ ಆದರ್ಶವೂ ಆಗಿರುತ್ತದೆ.



# ಮ. ಮಲ್ಲಪ್ಪನವರ ಗ್ರಂಥ ಸಂಪುಟ

i ಕವಿಕಾವ್ಯ ವಿಮರ್ಶೆ

| | | |
|---|---|---|
| 1 | ಷಡಕ್ಷರದೇವನ ನೆನಪು | 1947 |
| 2 | ಕನ್ನಡ ಗುಡಿ | 1949 |
| 3 | ಜೀವದ ಜೀವಾಳ | 1955 |
| 4 | ಮೃಚ್ಛಕಟಿಕ ದೀಪ್ತಿ | 1978 |
| 5 | ಷಡಕ್ಷರದೇವನ ರಸಕೃತಿ | |

ii ಸಾಹಿತಿ ಕೃತಿ ಸಮೀಕ್ಷೆ

| | | |
|---|---|---|
| 1 | ಬೆಳಗು ಸಂಜೆ | 1970 |
| 2 | ಶ್ರೀಶೈಲಂ ಸಾಹಿತ್ಯ ತೀರ್ಥ | 1975 |
| 3 | ಅನಕೃ ಸಾಹಿತ್ಯ ಸಮೀಕ್ಷೆ | 1976 |
| 4 | ಸಾಹಿತಿ ಪುಲಿಕೇಶಿ | 1979 |
| 5 | ಮಂಡ್ಯ ಜಿಲ್ಲಾ ಸಮಕಾಲೀನ ಬರಹಗಾರರು | 1979 |
| 6 | ಪುಸ್ತಕ ನೋಡಿ | 1988 |
| 7 | ಕಾವ್ಯಾನಂದ | |

iii ಜನಪದ ಸಾಹಿತ್ಯ

| | | |
|---|---|---|
| 1 | ಒರುಗಲ್ಲು ಸೂರೆ | 1979 |
| 2 | ಜಾನಪದದ ತವರು | |

iv ಕವನಕಣ

1 ಗಸ್ತು ಕೊಟ್ಟ ಗಂಡು

v ಕಥಾಕುಂಜ

1 ಒಂದುಗೂಡಿದರು

vi ಕಾದಂಬರಿ

1 ತಾಯಿಗಂಡ

vii ನಾಟಕ

1 ಶರಣ ವಿಜಯ

viii ಬಾಲಸಾಹಿತ್ಯ

1 ಮಕ್ಕಳು 1950
2 ರಾಜರ ಹಬ್ಬ 1953
3 ಮಕ್ಕಳ ಕವಿತಾ ರಚನೆ

ix ಗುರು ಪರಂಪರೆ

1 ಧನಗೂರು ಮಠದ ಗುರುಪರಂಪರೆ 1953
2 ಪಲಗೂರು ಬೃಹನ್ಮಠದ ಸಂಕ್ಷಿಪ್ತ ಇತಿಹಾಸ 1964
3 ದೇಗುಲಶ್ರೀ

x ಜೀವನ ಚರಿತ್ರೆ

1 ಶ್ರೀ ಸಿದ್ಧಮಲ್ಲೇಶ ವಿಜಯ 1951
2 ನಮ್ಮವರು 1951
3 ದೃಷ್ಟಿಯೋಗ ಚಕ್ರವರ್ತಿ 1969
4 ಎಚ್. ಸಿದ್ಧಯ್ಯನವರು 1988
5 ಇಮ್ಮಡಿ ಮಹಲಿಂಗ ಸ್ವಾಮಿಗಳು

ಪುಸ್ತಕ ನೋಡಿ


ಗ್ರಂಥಾಲಯ
20248
ಬೆಂಗಳೂರು-19

